ಕಾಯಕವೇ ಕೈಲಾಸ

# ಸಿದ್ಧಗಂಗಾ





ದಸರಾ ಹಬ್ಬದ ಶುಭಾಶಯಗಳು

ಸಂಪುಟ : ೫೩ ಸೆಪ್ಟೆಂಬರ್ ೨೦೧೭ ಸಂಚಿಕೆ : ೦೯



ಆಗಸ್ಟ್ ೧೫ ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ೭೧ನೇ ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ, ಜಿಲ್ಲಾಧಿಕಾರಿ ಶ್ರೀ ಕೆ.ಪಿ. ಮೋಹನ್‌ರಾಜ್, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ ಡಾ. ದಿವ್ಯಾ ವಿ. ಗೋಪಿನಾಥ್, ಜಿ.ಪಂ. ಕಾರ್ಯನಿರ್ವಹಣಾಧಿಕಾರಿ ಶ್ರೀ ಕೆ.ಜಿ. ಶಾಂತರಾಮ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.





ಮೈಸೂರಿನ ಮಹಾರಾಜರಾದ ಶ್ರೀ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಮಾಡಿ ದಿವ್ಯಾಶೀರ್ವಾದ ಪಡೆದರು.




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ
ಸಿ. ಕುಮಾರಸ್ವಾಮಿ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ




ಸಂಪುಟ : ೫೩ ಸೆಪ್ಟೆಂಬರ್ ೨೦೧೭ ಸಂಚಿಕೆ : ೦೯

## ಒಳಪುಟಗಳಲ್ಲಿ .................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ಹಿಂದೂ ಧರ್ಮದ ವೈಶಿಷ್ಟ್ಯ

**ಧ**ರ್ಮವೆಂಬುದು ಆತ್ಮ ವ್ಯವಸಾಯದ ಫಲ. ಒಳ್ಳೆಯತನವೇ ಧರ್ಮದ ಸಾರ. ಒಳ್ಳೆಯತನವೆಂಬುದು ಮಾನವೀಯತೆಯ ಮಂಗಳ ಬೆಳಕು. ಹಿಂದೂ ಧರ್ಮ ಜಗತ್ತು ಕಂಡ ಶ್ರೇಷ್ಠ ಧರ್ಮಗಳಲ್ಲೊಂದು. ಈ ಧರ್ಮದ ತತ್ವವೂ ಇದರ ಪರಿಮಳವೂ ನಮ್ಮ ಸಾಹಿತ್ಯ, ಇತಿಹಾಸ, ಪುರಾಣ, ಪುಣ್ಯಕಥೆ, ಆಚಾರ ವ್ಯವಹಾರ ಇವುಗಳಲ್ಲಿ ಹಾಸುಹೊಕ್ಕಾಗಿದೆ. ಸಾಮರಸ್ಯ ಹಿಂದೂ ಧರ್ಮದ ವೈಶಿಷ್ಟ್ಯ. ಇಹಪರಗಳ ಸಾಮರಸ್ಯ, ವ್ಯಷ್ಟಿ, ಸಮಷ್ಟಿಗಳ ಸಾಮರಸ್ಯ, ಇಲ್ಲಿ ಅರಳಿದೆ. ಹಿಂದೂ ಧರ್ಮದ ಮೂಲ ನಮ್ಮ ಅಮೃತಮಯವಾದ ಅಜೇಯ ತತ್ತ್ವವಾದ ವೇದಗಳು. ನಮ್ಮ ಸಂಸ್ಕೃತಿಯ ಬೆಳವಣಿಗೆ ಬಂದಿರುವುದು ವೇದಗಳ ನೀತಿಯಲ್ಲಿ ಜನಿಸಿದ ನಮ್ಮ ದೇಶದ ಮಹಾನುಭಾವರುಗಳ ಚರಿತ್ರೆಯ ಮಹಿಮೆಯಿಂದ.

ಹಿಂದೂ ಧರ್ಮಕ್ಕೆ ಒಂದು ಸ್ಪಷ್ಟವಾದ ವ್ಯಕ್ತಿತ್ವವಿದೆ. ತನ್ನದೇ ಆದ ಶ್ರೇಷ್ಠವಾದ ಸಂಸ್ಕೃತಿ ಇದೆ. ಈ ಸಂಸ್ಕೃತಿಯ ತಾರತಮ್ಯಭಾವದಲ್ಲಿ ಆತ್ಮ ಮತ್ತು ಪ್ರಜ್ಞೆ ಎಂಬುವು ಇಂದ್ರಿಯಗಳಿಗಿಂತ ಹೆಚ್ಚು, ಒಳ್ಳೆಯತನ, ಬುದ್ಧಿ, ಐಶ್ವರ್ಯಗಳಿಗಿಂತ ಹೆಚ್ಚು. ಭಕ್ತಿ, ಪ್ರೇಮ, ಅಹಿಂಸೆ ಇವು ಪರಮಧರ್ಮ. ಇವೇ ಭಾರತದ ಸಂಸ್ಕೃತಿಯ ವೈಶಿಷ್ಟ್ಯ. ಈ ಸಂಸ್ಕೃತಿ ಸನಾತನವಾದದ್ದು. ಇದು ಕೇವಲ ನಮ್ಮೊಬ್ಬರ ಶ್ರೇಯಸ್ಸಿಗಾಗಿ ಮೀಸಲಾಗಿಲ್ಲ. ಭೂಮಂಡಲದ ಸೌಖ್ಯಕ್ಕಾಗಿ ನಮ್ಮಲ್ಲಿ ನ್ಯಾಸವಾಗಿಟ್ಟಿದೆ. ಇದನ್ನು ನಮ್ಮ ನಡತೆ, ನಮ್ಮ ಸಾಹಿತ್ಯ, ನಮ್ಮ ಅಂತರರಾಷ್ಟ್ರೀಯ ನೀತಿಯಲ್ಲಿ ಪ್ರಕಟಿಸಿ ರೂಢಿಗೆ ತಂದು ಪ್ರಸಾರ ಮಾಡುವುದು ನಮ್ಮ ಕರ್ತವ್ಯ.

'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯಾ' ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂಬ ಭಗವಾನ್ ಬಸವಣ್ಣನವರ ವಾಣಿಯಂತೆ ಇಲ್ಲಿ ಅಲ್ಲಿ ಸಲ್ಲುವ ಜೀವನ ಶೈಲಿ ಹಿಂದೂ ಧರ್ಮದ ವೈಶಿಷ್ಟ್ಯವೆಂಬುದನ್ನು ಜಗತ್ತಿಗೆ ಪರಿಚಯಿಸಬೇಕಾಗಿದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು





# ಶಿಕ್ಷಕ ಸದಾ ಕ್ರಿಯಾಶೀಲರಾಗಿರಬೇಕು

**ಸೆ**ಪ್ಟೆಂಬರ್ ಐದು ಶಿಕ್ಷಕರ ದಿನ. ಭಾರತದ ರಾಷ್ಟ್ರಪತಿಯಾಗಿದ್ದ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರವರು ಉಪಾಧ್ಯಾಯರಿಗೆ ಸಲ್ಲಿಸಿದ ಅತ್ಯಮೂಲ್ಯ ಗೌರವ.

ಶಿಕ್ಷಕ ಜಾಗೃತ ಜೀವಿ. ನಿತ್ಯ ನಿರಂತರ ಕಲಿಯುತ್ತಿರುವ ಕ್ರಿಯಾಶೀಲ. ದಿನನಿತ್ಯದ ಆಗುಹೋಗುಗಳನ್ನು ಬಳಿಗೆ ಬಂದ ವಿದ್ಯಾರ್ಥಿಗಳಿಗೆ ಪರಿಚಯಿಸಿಕೊಡುವ ಆತ್ಮೀಯ ಬಂಧು. ಕೇವಲ ತರಗತಿಯ ಒಳಗಡೆ ಮಾತ್ರವಲ್ಲ. ಎಲ್ಲ ಕಡೆಯಲ್ಲೂ, ಎಲ್ಲದರಲ್ಲೂ ಕಲಿಯುತ್ತಲೇ ಮುನ್ನಡೆಯುವ ಸ್ವಭಾವಿ ಸಂಭಾವಿತ. ಒಳಿತನ್ನು ಗೌರವಿಸುವ, ಕೆಟ್ಟುದನ್ನು ಅವಗಣಿಸುವ ವಿದ್ಯಾರ್ಥಿ- ತನ್ನ ವಿದ್ಯಾರ್ಥಿಗಳಿಗೆ ಮಾರ್ಗದರ್ಶಿಯಾಗಿ, ಅಣ್ಣನಾಗಿ, ತಮ್ಮನಾಗಿ, ಗೆಳೆಯನಾಗಿ, ಒಮ್ಮೊಮ್ಮೆ ದಂಡಧಾರಿಯಾಗಿ, ತಾಯಿಯಾಗಿ, ತಂದೆಯಾಗಿ ವಿದ್ಯಾರ್ಥಿಯನ್ನು ಸತ್ಪ್ರಜೆಯನ್ನಾಗಿ ರೂಪಿಸುವ ಶಿಲ್ಪಿ. ಒಳ್ಳೆಯ ನಡತೆಯ ವಿದ್ಯಾರ್ಥಿಯನ್ನು ಕಂಡಾಗ 'ಯಾರಪ್ಪಾ ನಿನಗೆ ಕಲಿಸಿದ ಮೇಷ್ಟ್ರು, ಎಂಥಾ ಪುಣ್ಯಾತ್ಮನಪ್ಪಾ ಅವನು? ಎಂದು ಹೊಗಳುವ, ಪ್ರಶಂಸಿಸುವ ಸಂದರ್ಭಗಳು ಅದೆಷ್ಟೋ? ಅಂತೆಯೇ ಯಾವನಪ್ಪಾ, ನಿನಗೆ ಕಲಿಸಿದ ಮೇಷ್ಟ್ರು? ಇದನ್ನೇ ಏನು ಅವನು ನಿನಗೆ ಕಲಿಸಿದ್ದು? ಎಂದು ಕೆಟ್ಟ ವರ್ತನೆಯ ವ್ಯಕ್ತಿಯನ್ನು ಕಂಡಾಗ ಹೇಳುವುದೂ ಉಂಟಲ್ಲವೆ? ಅಂದರೆ ಶಿಕ್ಷಕನೆಂಬುವನು ಶಿಲೆಯನ್ನು ಶಿಲ್ಪವನ್ನಾಗಿಸುವ, ಮಣ್ಣಿನಿಂದ ಮಡಕೆಯನ್ನು ಮಾಡುವ, ವಿಷವನ್ನು ಅಮೃತವನ್ನಾಗಿಸುವ, ಪವಿತ್ರಾತ್ಮ, ಇತ್ತೀಚಿನ ದಿನಗಳಲ್ಲಿ ಶಿಕ್ಷಕ ವೃತ್ತಿಗನುಗುಣವಾಗಿ ನಡೆದುಕೊಳ್ಳುತ್ತಿಲ್ಲ; ವೃತ್ತಿಗೆ ಅವಮಾನಕರವಾದ ವ್ಯಕ್ತಿಯಾಗುತ್ತಿದ್ದಾರೆ. ನುಡಿ ಶುದ್ಧವಿಲ್ಲ, ನಡೆ ಶುದ್ಧವಿಲ್ಲ, ಜೀವನ ಶೈಲಿಯೇ ಬದಲಾಗುತ್ತಿದೆ ಎಂಬ ಮಾತುಗಳು ಎಲ್ಲೆಡೆಯೂ ಕೇಳಿ ಬರುತ್ತಿದೆ. ಇದನ್ನು ಕಾಲಧರ್ಮವೆನ್ನಬೇಕೋ, ದೇಶಧರ್ಮವೆನ್ನಬೇಕೋ? ಪ್ರಾಜ್ಞರು ಪರ್ಯಾಲೋಚಿಸಬೇಕಾಗಿದೆ.

ಸ್ಪಷ್ಟವಾದ ಅಕ್ಷರ ಜ್ಞಾನ ದೂರರಾದ, ಕಾಗುಣಿತ ತಿಳಿಯದ, ನಾಮಪದ, ಕ್ರಿಯಾಪದಗಳ ವ್ಯತ್ಯಾಸ ತಿಳಿಯದ ಶಿಕ್ಷಕರನ್ನು ಕಾಣುತ್ತಿದ್ದೇವೆ. ಎಲ್ಲಾ ಶಿಕ್ಷಕರೂ ಹೀಗೆ ಎಂದಲ್ಲ. ಒಳ್ಳೆಯ ಶಿಕ್ಷಕರೂ ಇದ್ದಾರೆ. ಅವರನ್ನು ನೆನೆಯಬೇಕು, ನಮಸ್ಕರಿಸಬೇಕು, ಅಂಥವರ ಸಂಖ್ಯೆ ಹೆಚ್ಚಾಗಬೇಕು.

ಶಿಕ್ಷಕ ಬಂಧು ಭಗಿನಿಯರಿಗೆಲ್ಲಾ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

## ಶ್ರೀ ಸಿದ್ಧಲಿಂಗೇಶ್ವರ ವಚನ



*ಅಡವಿಯ ಹುಲ್ಲಮೇದ ಪಶು*
*ಮಡುವಿನಗ್ಘವಣಿಯ ಕುಡಿದು*
*ನಡು ಬೀದಿಯಲ್ಲಿ ಬರುತ್ತಿರಲು*
*ಕಡೆಯಲ್ಲಿರ್ದ ಹುಲಿ ಬಂದು ಹಿಡಿಯಲು*
*ನಿನ್ನೊಡನೆಯನೇನ ಬಳಸಿಕೊಂಡೆನೋ ಎಂದು*
*ತನ್ನೊಡೆಯನ ಕರೆಯಲು*
*ಹಿಡಿದ ಹುಲಿ ಬಿಟ್ಟೋಡಿತ್ತು ನೋಡಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಅಡವಿಯ-ಅರಣ್ಯದ, ಹುಲ್ಲ-ತೃಣವನು. ಮೇದ-ಭಕ್ಷಿಸಿದ, ಪಶು-ಆಕಳು, ಮಡುವಿನ-ಕಾಡಗಟ್ಟೆಯ, ಅಗ್ಘವಣಿಯ ಉದಕವನು, ಕುಡಿದು-ಪಾನವ ಮಾಡಿ, ನಡುಬೀದಿಯಲಿ- ನಡುಚಾರದಲ್ಲಿ, ಬರುತ್ತಿರಲು – ಐತರುತ್ತಿರಲು, ಕಡೆಯಲಿರ್ದ – ಎಡಬಲದಲ್ಲಿರುತ್ತಿರ್ದ, ಹುಲಿ- ವ್ಯಾಘ್ರನು, ಬಂದು- ಐದು ಬಂದು, ಹಿಡಿಯಲು -ಪಿಡಿಯಲು, ನಿನ್ನೊಡನೆಯ – ನಿನ್ನ ದ್ರವ್ಯವನು, ಏನ ಬಳಸಿಕೊಂಡೆನೋ- ಏನ ತೆಗೆದುಕೊಂಡೆನೊ, ಎಂದು-ಹೀಗೆಂದು, ತನ್ನೊಡೆಯನ ಹುಲ್ಲನ್ನು ಹಾಕಿ, ನೀರನ್ನು ತೋರಿ ಸಂರಕ್ಷಣೆ ಮಾಡುವಂಥ ಒಡೆಯನ, ಕರೆಯಲು-ಆಹ್ವಾನಿಸಲು, ಹಿಡಿದ-ಹಿಡಿದಂಥ, ಹುಲಿ-ವ್ಯಾಘ್ರನು, ಬಿಟ್ಟು-ಬಿಟ್ಟುಕೊಟ್ಟು ಓಡಿತ್ತು- ಓಡು ಪಲಾಯನ ಎಂದು ಪಲಾಯನವಾಯಿತ್ತೆಂಬ, ದೃಷ್ಟೋಪ-ಮಾನವ ಹಾಂಗೆ, ಅಡವಿಯ-ಭವಾರಣ್ಯದ, ಹುಲ್ಲ-ವಿಷಯಂಗಳೆಂಬ ತೃಣವನು, ಮೇದ-ಭಕ್ಷಿಸಿದ, ಪಶು-ಜೀವನವೆಂಬ ಪಶು, ಮಡುವಿ-ನಘ್ಘವಣಿಯ-ದೇಹದಂತರಂಗದಲ್ಲಿರುವ ಸಂಸಾರ ವಿಷಯ ಚಿಂತನು, ಕುಡಿದು-ಪಾನವ ಮಾಡಿ, ನಡುಬೀದಿಯಲ್ಲಿ-ಶಿವಾದ್ವೈತಭಕ್ತಿ ಯೆಂಬಾಚಾರದಲ್ಲಿ, ಬರುತ್ತಿರಲು-ಐತರುತ್ತಿರಲು, ಕಡೆಯಲ್ಲಿದ್ದ – ಶಿವತತ್ವಕ್ಕೆ ವಿಲಕ್ಷಣವಾಗಿದ್ದ, ಹುಲಿ-ಕಾಲ ವ್ಯಾಘ್ರನು, ಬಂದು-ಐದು ಬಂದು, ಹಿಡಿಯಲು-ದೃಢವಿಡಿಯಲು, ನಿನ್ನೊಡವೆಯ-ನಿನ್ನೊಡವೆಯಾದಂಥ ಪ್ರಾರಬ್ಧ ಭೋಗವನು, ಏನು ಬಳಸಿಕೊಂಡೆನೋ- ಏನು ತೆಗೆದುಕೊಂಡೆನೊ, ಎಂದು-ಹೀಗೆಂದು, ತನ್ನೊಡೆಯನ – ತನ್ನ ಕರ್ತೃ ಸ್ವರೂಪವಾದ ಶ್ರೀಗುರುನಾಥನ ಕರೆಯಲು-ಉಪಾವಸ್ತೆಯ ಮಾಡಲು, ಹುಲಿ-ವ್ಯಾಘ್ರನು, ಬಿಟ್ಟು-ವಿಸರ್ಜಿಸಿ, ಓಡಿತ್ತು- ನಷ್ಟವಾಗಿ ಹೋಯಿತ್ತು, ನೋಡಾ-ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸಂಸಾರ ಯೋಗವ ಶಿವಯೋಗಗೊಳಿಪನು
ಹಂಸಕ್ಷೀರ ತೆರದಿ ಶರಣನು । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವಗಮ್ಯವೆ ಅರಿವಿನ ವಿಶ್ರಾಮವೆ
ಭಾವದ ಬಯಕೆಯ ನಿಜ ನಿಲವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಿಣಾಮದ ಮೇರುವೆ ಮನದಸಿರಿಮಹಿಮವೆ
ನಾನು ಸೀಮೆಯಗೆದ್ದಸಿರಿಚೆಲುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉರಿಯುಂಡ ಕರ್ಪೂರವೆ ಶಬ್ದಮುಗ್ಧ ಚೆಲುವೆ
ಘನಕೆ ಘನವಾಗಿ ಅರಳಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೊಮ್ಮವನು ಅರಿದರೆ ಸುಮ್ಮನಿರಬೇಕೆಂಬ
ಬೆಳಗಿನ ಬೆಳಗಿರುವ ಮಹಿಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತ್ರಿವಿಧಿಯ ಮೀರಿದ ಅನುಭಾವ ಶಿವಸಿರಿಯೆ
ಗುರುಲಿಂಗಜಂಗಮ ಮೇರುವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನೊಲಿದು ತೆರೆದಿರುವ ತಾಂತ್ರಿಕ ಜ್ಞಾನಾಲಯವು
ದೇಶ ವಿದೇಶದಲಿ ಹೆಸರಾಯ್ತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಸಿ ಆಶೀರ್ವದಿಸು ಶಿರಬಾಗಿ ನಮಿಪೆವು
ತವ ಸ್ಮರಣೆಯನೆಂದು ಬಿಡದಿಹೆವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯುಗದ ಸಿರಿಯಾಗಿರುವೆ ಜಗದ ಸಿರಿಯಾಗಿರುವೆ
ಯುಗದಜಗದಸಿರಿಯಾಗಿ ಅರಳಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಯಲ ದೇಹಿದ ನೀನು ಬಯಲಾತ್ಮಸಿರಿ ನೀನು
ಬಯಲ ಭಾವದ ಶಿವಕೃಷಿಕ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು



– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

### ಶ್ರೀ ಗೋಸಲಸಿದ್ಧೇಶ್ವರ ಬೆಳಗಿದ ಕ್ಷೇತ್ರಗಳು

**ಸಿಂಗ್ರಿಹಳ್ಳಿಯಲ್ಲಿ ಗೋಸಲಾರ್ಯಯತಿ**

**ಪರಿಸರ ಪಾವನ ಪಂಚಲಿಂಗೇಶ್ವರ – ಮಳೆದಾನಿ ಕೊಂಗಮಲ್ಲೇಶ್ವರ**

**ಭೌಗೋಳಿಕ ಪುಣ್ಯೇತಿಹಾಸ ಪರಿಸರ :** ತುಮಕೂರು ಜಿಲ್ಲೆ, ಕೊರಟಗೆರೆ ತಾ. ಎಲೆರಾಂಪುರ ಗ್ರಾಮಪಂಚಾಯಿತಿಗೆ ಸೇರಿದ ಸಿಂಗ್ರೀಹಳ್ಳಿಯ ಪಂಚಲಿಂಗೇಶ್ವರ ಗವಿಗುಡಿಯು ಪುರಾತನ ಕಾಲದ ಗುಡಿಯಾಗಿದೆ. ಪ್ರಾಚೀನ ಇತಿಹಾಸವನ್ನು ಹೊಂದಿದೆ. ಶ್ರೀ ಗುರು ಗೋಸಲಾರ್ಯರ ತಪೋನುಷ್ಠಾನದ ಐತಿಹ್ಯದ ಗುರುನೆಲೆಯಾಗಿ ಮಹತ್ವ ಪಡೆದಿದೆ. ಈ ಗುಡಿಯ ಜಾಗದಿಂದ ಉತ್ತರದಿಕ್ಕಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರವಿದೆ. ಈಶಾನ್ಯಕ್ಕೆ ಬಿಳುಗುಂಬದಲ್ಲಿ ಶರಣ ಸಿದ್ಧರಾಮೇಶ್ವರ ಕ್ಷೇತ್ರವಿದೆ. ಆಗ್ನೇಯಕ್ಕೆ ಮೈದಾಳದ ವೀರಭದ್ರನ (ಮಡಿವಾಳ ಮಾಚಯ್ಯ ಕ್ಷೇತ್ರ) ವೀರನೆಲೆ ಇದೆ. ದಕ್ಷಿಣಕ್ಕೆ ದೇವರಾಯನ ದುರ್ಗದ ಶ್ರೇಣಿ, ಪಶ್ಚಿಮಕ್ಕೆ ಶಿವಗಂಗೆ, ಹರಳೂರು ವೀರಭದ್ರನ ಪವಿತ್ರ ತಾಣಗಳಿವೆ. ಪೂರ್ವಕ್ಕೆ ದೊಡ್ಡವಾಡಿ ಬೆಟ್ಟದಲ್ಲಿ ವೆಂಕಟರಮಣ ಹಾಗೂ ಹನುಮಂತನ ಗುಡಿಗಳಿವೆ. ಈ ದೈವಿಕ ಪರಿಸರದ ಸುತ್ತುವರಿಯಲ್ಲಿ ಸಿಂಗ್ರೀಹಳ್ಳಿಯ ಕೇಂದ್ರದೇವತೆಯಾಗಿ ಪಂಚಲಿಂಗಗಳ ಶ್ರೇಣಿಯಾಗಿ 'ಪಂಚಲಿಂಗೇಶ್ವರ' ಹೆಸರುಗೊಂಡಿದ್ದಾನೆ. ಪ್ರಾರ್ಥಿಸಿದಾಗ ಮಳೆ ಬರಿಸುವ ದೇವರೆಂದೂ, ಜನರೂಢಿಯಲ್ಲಿದೆ ಹಾಗೂ ಶ್ರೀ ಗೋಸಲ ಸಿದ್ದೇಶ್ವರರೊಡನೆ ತಮಿಳು ಶಿವಭಕ್ತ ಶಿಷ್ಯವೃಂದವೂ ಇದ್ದ ಕಾರಣ, ಉಭಯ ಸಂಗತಿಗಳೂ ಸೇರಿದಂತೆ ಕೊಂಗ(ಮಳೆ)ಮಲ್ಲೇಶ್ವರ ಎಂದೂ ಕರೆಯುವ ವಾಡಿಕೆ ಇದೆ. ಸಿಂಗ್ರೀಹಳ್ಳಿ ಗ್ರಾಮದಿಂದ ಸುಮಾರು ಒಂದೂವರೆ ಕಿ.ಮೀ. ದೂರದಲ್ಲಿ ಪಶ್ಚಿಮಕ್ಕೆ ಇರುವ ಗುಡ್ಡದ ಬಂಡೆಯ ಗವಿಯೊಳಗೆ ಈ ಪಂಚಲಿಂಗೇಶ್ವರ-ಕೊಂಗ-ಮಳೆ-ಮಲ್ಲೇಶ್ವರ ನೆಲೆಗೊಂಡಿದ್ದಾನೆ.

ಈ ದೇವನಿರುವ ಗವಿದೇಗುಲದ ಪರಿಸರ ತುಂಬಾ ಮನೋಹರವಾಗಿದೆ. ಬೆಟ್ಟಗಳ ಜಾಲದ ನಡುವೆ ಮರ ಗಿಡ ತೊರೆ ಮೂಲಿಕೆಗಳ, ವಿಶಿಷ್ಟ ಆಕೃತಿಗಳ ಬಂಡೆಗಳ

ಹಿಂಬದಿ ಅಡ್ಡಬೆಟ್ಟ ಸಹಿತವಾದ ಬೆಟ್ಟಗುಡ್ಡಗಳು, ವಿಶಿಷ್ಟ ಆಕಾರದ ಬಂಡೆಗಳು, ಮುಂಬದಿಯಲ್ಲಿ ದೊಡ್ಡವಾಡಿ ಬೆಟ್ಟ, ಚಿಕ್ಕದೊಡ್ಡವಾಡಿ ಬೆಟ್ಟದ ಪರಿಸರದಲ್ಲಿರುವ ಬಂಡೆಗವಿ ಪಂಚಲಿಂಗೇಶ್ವರ ದೇಗುಲದ ನೈಸರ್ಗಿಕ ನೋಟ

ಸುತ್ತುವರಿಯನ್ನು ಅದು ಹೊಂದಿದೆ. ಮುಂಬದಿಗೆ ದೊಡ್ಡವಾಡಿ ಬೆಟ್ಟ, ಚಿಕ್ಕದೊಡ್ಡವಾಡಿ ಬೆಟ್ಟ ಅವಕ್ಕೆ ಸೇರಿದಂತೆ ಹಿಂಬದಿ ಅಡ್ಡಬೆಟ್ಟ ಇತ್ಯಾದಿ ಬೆಟ್ಟಗುಡ್ಡಗಳ ಸಾಲಾವಳಿಯೂ ಸುತ್ತುವರಿದು ಗಂಭೀರ ದೈವಿಕ ವಾತಾವರಣವನ್ನು ನಿರ್ಮಿಸಿವೆ. ಪರಿಸರ ಪ್ರೇಮಿಗಳಿಗೆ, ಪರ್ವತ ಸಾಹಸಿ ಸಂಚಾರಿಗಳಿಗೆ, ನೆಮ್ಮದಿ ಶಾಂತಿಯಿಂದ ದೇವದರ್ಶನಾಕಾಂಕ್ಷಿಗಳಿಗೆ ಹೇಳಿ ಮಾಡಿಸಿದಂಥ ತಾಣವಿದಾಗಿದೆ. ಈ ಪರಿಸರವೇ ಜಲಾಯನ ಪ್ರದೇಶವಾಗಿದೆ. ಗವಿಬಂಡೆಯ ಹಿಂಬದಿ ಸನಿಹದಲ್ಲಿ, ಪ್ರಾಚೀನದಲ್ಲಿ ಸದಾ ತುಂಬಿ ಹರಿಯುತ್ತಿದ್ದ ತೊರೆಯು ಈಗ ಮಳೆಗಾಲದಲ್ಲಿ ಮಾತ್ರ ಉಕ್ಕಿ ಹರಿದು ಬೇಸಿಗೆಯಲ್ಲಿ ತೆಳುವಾಗಿ ಸರಿದುಹೋಗುತ್ತದೆ.

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦

ಪಂಚಲಿಂಗೇಶ್ವರ ಗವಿಬಂಡೆಯ ದೇಗುಲದ ಒಳಭಿತ್ತಿಯಲ್ಲಿ (ಭಿತ್ತಿನಲ್ಲಿ) ಜಿಂಕೆ, ಹುಲಿ, ಪಕ್ಷಿ, ಗೋವು ಇತ್ಯಾದಿ ಪ್ರಾಣಿ ಪಕ್ಷಿಗಳ ಗೆರೆಚಿತ್ರಗಳಿದ್ದು ಮಸುಕಾಗಿವೆ; ಅಂದರೆ ಸುಮಾರು ಎರಡು ಸಾವಿರ ವರ್ಷಗಳ ಮುನ್ನಿನ ಪ್ರಾಗೈತಿಹಾಸ ಕಾಲದಲ್ಲಿ ವಾಸ್ತವ್ಯದಲ್ಲಿದ್ದ ಬುಡಕಟ್ಟಿನ ಜನರಿಂದ ರೂಪುಗೊಂಡಂಥವಾಗಿವೆ. ಸಿದ್ಧಗಂಗಾಕ್ಷೇತ್ರದ ರಾಮೇಶ್ವರ ಬೆಟ್ಟದ ಗೋಸಲಸಿದ್ಧರಿದ್ದ ಗವಿಯ ಭಿತ್ತಿಯಲ್ಲಿ ಇದೇ ಬಗೆಯಲ್ಲಿ ಬರೆದ ಪಕ್ಷಿಯ ಗೆರೆಚಿತ್ರಗಳು ಕಂಡುಬಂದಿರುವಲ್ಲಿ ಪ್ರಾಗೈತಿಹಾಸ ಕಾಲದ ಬುಡಕಟ್ಟುಗಳ ಸಂಚಾರಿ ತಂಡಗಳ ನೆಲೆಗಳ ಸುತ್ತುವರಿ ಪ್ರದೇಶಕ್ಕೆ ಸಿಂಗ್ರೀಹಳ್ಳಿಯು ಪ್ರದೇಶವೂ ಸೇರಿದುದಾಗಿತ್ತೆನ್ನಬೇಕು. ಅಂದರೆ ಈ ಗವಿಯಲ್ಲಿ ವಾಸ ಮಾಡುತ್ತಿದ್ದ ಕುರುಹಾಗಿ ಈ ಚಿತ್ರಗಳು ಕಾಣಬರುತ್ತವೆ.

ಪಂಚಲಿಂಗೇಶ್ವರ ಬಂಡೆಗವಿ ದೇಗುಲದ ಬಂಡೆಭಿತ್ತಿಯ ಮೇಲಿನ ಪ್ರಾಗೈತಿಹಾಸಿಕ ಪ್ರಾಣಿ ಪಕ್ಷಿಗಳ ಗೆರೆ ಚಿತ್ರಗಳು

ಒಂದು ಕಾಲಕ್ಕೆ ಇಲ್ಲಿನ ಕಾಡಿನಲ್ಲಿ ಹುಲಿ, ಕರಡಿ, ನವಿಲು, ಜಿಂಕೆ, ತೋಳಗಳು ಬಹಳವಾಗಿ ಇದ್ದ ಬಗ್ಗೆ ಸ್ಥಳೀಯ ಹಿರಿಯರು ಹೇಳುತ್ತಾರೆ. ಈಗ ಈ ಸುತ್ತಿಗೆ ೨೭೧ ಎಕರೆ ರಿಸರ್ವ್ ಫಾರೆಸ್ಟ್ ಆಗಿದೆ. ಎಲೆರಾಂಪುರ, ವೀಳ್ಯದೆಲೆಗೆ ಖ್ಯಾತಿ ಇದ್ದರೂ ಮೊದಲಿಗೆ ವಿಷಾಪಹಾರಿ ಎಲೆಸಸ್ಯದ ನೆಲೆ ಆಗಿದ್ದುದುದರ ಸಂಭಾವ್ಯತೆಯನ್ನು ಪರಿಸರವೇ ಸೂಚಿಸುವುದಲ್ಲದೆ ಹಾಗೂ ಆ ಗ್ರಾಮ ಪಂಚಾಯಿತಿಗೆ ೨ ಕಿ.ಮೀ. ದೂರದಲ್ಲಿ ಸಿಂಗ್ರೀಹಳ್ಳಿ ಇರುವುದು ಗಮನಾರ್ಹ.

'ಸಿಂಗಿ' ಎಂದರೆ 'ವಿಷ' ಎಂಬ ಅರ್ಥವಿದೆ. ಶಿವನಿಗೂ 'ಸಿಂಗಿ' ಎಂಬ ಒಂದು ಹೆಸರು ಇದೆ. ಅದಾಗಿ ಸಿಂಗ್ರಿಹಳ್ಳಿ ವಿಷಾಪಹಾರಿ ಮೂಲಿಕಾಸಸ್ಯ ಬೆಳೆಯುವ ಪ್ರದೇಶದಲ್ಲಿದ್ದು ಅನ್ವಯಾರ್ಥಕವಾಗಿ ಸಸ್ಯಮೂಲದ ಸ್ಥಳನಾಮವನ್ನು ಪಡೆದಿದೆ. ನಾಗಸರ್ಪಗಳ ವಿಪುಲತೆ ಇದ್ದ ಬಗ್ಗೆಯೂ ಕೇಳಿಬರುವಲ್ಲಿ ವಿಷಾಪಹಾರಿ ಮೂಲಿಕೆಗಳ ಅಸ್ತಿತ್ವದ ಮಹತ್ವ ಗಮನಕ್ಕೆ ಬರುತ್ತದೆ. ಇಂಥ ಪರಿಸರದ ತೆಕ್ಕೆಗೆ ದೇವಸಾನ್ನಿಧ್ಯವೂ ಕೂಡಿ, ನಾಗಾರಾಧನೆಯ ಪದ್ಧತಿಯೂ ರೂಢಿಗೊಂಡಿದೆ. ಇಲ್ಲಿರುವ ಪಂಚಲಿಂಗೇಶ್ವರ ಹಾಗೂ ನಾಗಶಿಲ್ಪಗಳ ಸಾಲಾವಳಿಯನ್ನು, ಅವನ ಹಿಂದೆ ಬಂಡೆಯ ಭಿತ್ತಿಯಲ್ಲಿ ಸೇರಿರುವುದು ಭಕ್ತಜನಮಾನಿತ ಸಾಕ್ಷಿಗಳಾಗಿವೆ.

**ಐತಿಹ್ಯ ಮತ್ತು ಇತಿಹಾಸ :** ಸಿಂಗ್ರೀಹಳ್ಳಿಯ ಈ ಬಂಡೆಗವಿಯಲ್ಲಿ 'ಪಂಚಲಿಂಗೇಶ್ವರ'ನ ಸ್ಥಾಪನೆಯ ಕುರಿತಂತೆ ಕತೆ ಹೀಗಿದೆ. ದಕ್ಷಿಣದ ಕಡೆಯಿಂದ ಎತ್ತಿನ ಬಂಡಿಯ ಮೇಲೆ ಮುತ್ತಿನ ವ್ಯಾಪಾರಿಗಳು ಬಂದು ಈ ಬಂಡೆಗವಿಯಲ್ಲಿ ಆಶ್ರಯಕ್ಕೆ ನಿಂತರಂತೆ. ವಾರಗಟ್ಟಲೆ ಇಲ್ಲಿ ಮಳೆ ಬೀಳುವಲ್ಲಿ ಈ ಹುಟ್ಟುಬಂಡೆಯ ಕೆಳಗಣ ಗವಿಯೇ ಅವರಿಗೆ ಆಸರೆಯಾಯಿತು. ಆಗ ಎರಡು ಒಲೆಗಳನ್ನಿಟ್ಟು ಅಡುಗೆಗೆ ತಯಾರಿ ಮಾಡಿದರು. ಆದರೆ ಅಡುಗೆ ಮಾಡಲು ಜೋಡಿಸಿಟ್ಟ ಒಲೆಗುಂಡು=ದುಂಡುಶಿಲೆಗಳು 'ಲಿಂಗ'ರೂಪವಾಗಿದ್ದುವು. ಅವು ಶಿವಲಿಂಗದ ಪ್ರತೀಕಗಳೆಂದು ಮೊದಲಿಗೆ ತಿಳಿಯದೆ ಪಾಕ ಸಿದ್ಧ ಮಾಡಿದ ನಂತರ ಗಮನಕ್ಕೆ ಬಂದಿತು. ಎಲ್ಲರಿಗೂ, ದೇವರಿಗೆ ಅಪಚಾರ ಮಾಡಿದೆವು ಎಂದು ಮಾನಸಿಕವಾಗಿ ಆಘಾತವಾಗಿ ಭಯದಿಂದ ಮೂರ್ಛೆ ಹೋದರಂತೆ, ಎತ್ತುಗಳೂ ನಿತ್ರಾಣವಾಗಿ ಬಿದ್ದುಕೊಂಡವಂತೆ. ಅಷ್ಟರಲ್ಲಿ ಅವರಲ್ಲಿದ್ದ ಹಿರಿಯರೊಬ್ಬರಿಗೆ ಮೂರ್ಛೆ ತಿಳಿದು ಎದ್ದು ಅವರು ಗ್ರಾಮದಲ್ಲಿ ಶಾಸ್ತ್ರ ಕೇಳಿದರಂತೆ. ಈ ದೇವರೇ ಇನ್ನು ಮುಂದೆ ನಿಮ್ಮ ಮನೆದೇವರು ಎಂದು ನಡೆದುಕೊಂಡು ಬನ್ನಿ ಎಂದರಂತೆ. ಆಗ ಹಿರಿಯರು ತಪ್ಪುಗಾಣಿಕೆ ಇಟ್ಟು ಮೀಸಲು ಕಟ್ಟಿ ಹರಸಿಕೊಳ್ಳಲು ಹೇಳಿದರು. ಆಗ ಉಳಿದವರೆಲ್ಲರನ್ನು ಎಚ್ಚರಿಸಿ ತಪ್ಪುಗಾಣಿಕೆ, ಮೀಸಲು ಕಟ್ಟಲು ಹರಸಿಕೊಂಡರು. ದೇವಸ್ಥಾನದ ಬಳಿಯ ಕಲ್ಯಾಣಿಯಲ್ಲಿ (ಈಗ ಮುಚ್ಚಿಹೋಗಿದೆ.) ಸ್ನಾನ ಮಾಡಿ ಐದು ಲಿಂಗಶಿಲೆಗಳನ್ನು ಒಲೆಗಳ ಸ್ವರೂಪದಲ್ಲಿ ಇಟ್ಟು ಭಯಭಕ್ತಿಯಿಂದ ಪೂಜೆ ಮಾಡಿದರಂತೆ. ಅಡುಗೆಗೆ ಮಡಿಯಿಂದ ಬೇರೆ ಕಲ್ಲುಗಳನ್ನಿಟ್ಟು ಬೇರೆ ಅಡುಗೆ ಮಾಡಿ 'ಪಂಚಲಿಂಗೇಶ್ವರ'ನಿಗೆ ನಿವೇದಿಸಿ ಪ್ರಸಾದ ಸೇವಿಸಿದರಂತೆ. ನಂತರ ದೇವರಿಗೆ ನೈವೇದ್ಯ ಪ್ರಸಾದ ತಯಾರಿಕೆಗೆ ತಮ್ಮ ಊರಿನ ಬಂಧುಗಳನ್ನು ಕರೆತಂದು ಪಾಕಶಾಲೆಯನ್ನು ಕಟ್ಟಿದರಂತೆ. ದಕ್ಷಿಣದ ಕಡೆಯಿಂದ ಬಂದವರಾಗಿ, ಅವರೊಡನೆ ಬಂದ ತಮಿಳುನಾಡಿನ ಶಿವಭಕ್ತ ವರ್ತಕರಲ್ಲಿ ಕೊಂಗವರ್ಗದವರೂ ಇದ್ದ ಕಾರಣ, **ಕೊಂಗಮಲ್ಲೇಶ್ವರ** (ಧಾರಾಕಾರ ಮಳೆಯಲ್ಲಿ ಆಸರೆ ದೊರೆತ ಕಾರಣವೂ ಸೇರಿ 'ಕೊಂಗಮಳೆಮಲ್ಲೇಶ್ವರ') ಎಂಬ ಹೆಸರಿನಿಂದಲೂ ಕರೆದರೆಂದು ಐತಿಹ್ಯವಿದೆ.

ಈ ಐತಿಹ್ಯಕ್ಕೆ ಸಮಾನಾಂತರವಾದ ವರ್ತಕರ ಕತೆಯ ಉದಾಹರಣೆಯೂ ಚಾಮರಾಜನಗರ ಜಿಲ್ಲೆಯ ಹರದನಹಳ್ಳಿ ದಿವ್ಯಲಿಂಗೇಶ್ವರ (ಅಣಿಲೇಶ್ವರ) ಸಂಬಂಧದಲ್ಲಿಯೂ ಇದೆ [**ಚನ್ನವೀರಜಂಗಮ ವಿರಚಿತ ಷಟ್‌ಸ್ಥಲವಲ್ಲಭ** (ದಿವ್ಯೇಶ್ವರ ಮಹಾತ್ಮ್ಯ ಕಥನಾ) ಪ್ರಥಮಾಶ್ವಾಸ, ವಚನ ೪೬ (ಪ್ರ.ಸಂ) ಪಂ. ಚನ್ನಪ್ಪ ಎರೆಸೀಮೆ, ೨೦೦೫, ಎಡೆಯೂರು]. ಇದಲ್ಲದೆ, ಹರದನಹಳ್ಳಿ ಹೇಳಿ ಕೇಳಿ ಗೋಸಲಸಿದ್ಧೇಶ್ವರರ ಶಿವಕಾಯಕದ ನೆಲೆ. ಅಲ್ಲಿಂದ ಶಾಸನೋಕ್ತವಾಗಿ [ಹರದನಹಳ್ಳಿ ತಾಮ್ರಶಾಸನದಲ್ಲಿ (ಚಾಮರಾಜನಗರ ೨೯೨, ಎ.ಕ. ಸಂ.೪) 'ಶ್ರೀಮದ್ಗೋಸಲಾರ್ಯಾ ಯತಿಪ್ರಸೀದ'ರಾಗಿ] ತುಳುವ ದೇಶಕ್ಕೆ





ಹೋಗಿ ತುಲಕಾಣ್ಣರಿಗೆ ಮಹಿಮೆಗಳನ್ನು ತೋರಿ ಶತಪವಾಡ ಮಹನೀಯರೆಂದು 'ಶ್ರೀಮದ್ಗೋಸಲಾರ್ಯವರ್ಯಸ್ವಾಮಿ' ಎಂದು ೧೩೪೫ರಲ್ಲಿ ವೀರಶೈವ ಪ್ರಸಾರಕಾರ್ಯದಲ್ಲಿ ಅವರು ಹೆಸರುಗೊಂಡರು.

ಹರದನಹಳ್ಳಿಯಿಂದ ಶ್ರೀ ಗೋಸಲಾರ್ಯ ಯತಿಗಳು ಸಿದ್ಧಗಂಗಾ ಕ್ಷೇತ್ರದತ್ತ ಸಂಚಾರ ಬರುವ ಕಾಲದಲ್ಲಿ ಚನ್ನಪಟ್ಟಣ ತಾ. ಸೋಗಾಲದ ಮೂಲಕ ಬಂದ ಸಾಧ್ಯತೆಯನ್ನು ಲಭ್ಯ ಆಕರಗಳ ಹಿನ್ನೆಲೆಯಲ್ಲಿ ಈ ಹಿಂದೆ ಹೇಳಿದೆಯಷ್ಟೆ. ಇದಲ್ಲದೆ ಸೋಗಾಲದ ನಂತರ ಮುಂದಿನ ಹಾದಿಯಲ್ಲಿ ಚನ್ನಪಟ್ಟಣದ ಗಡಿಗೆ ಇರುವ 'ಕುಡಿನೀರು ಕಟ್ಟೆ'ಗೆ ತಾಗಿದಂತೆ ಪ್ರಾಚೀನ 'ಕುಡಿನೀರು ಕಟ್ಟೆ ವಿರಕ್ತಮಠ'ವೂ ಇದೆ. ಐತಿಹ್ಯವಿರುವಂತೆ ಶ್ರೀ ಗೋಸಲಾರ್ಯ ಯತಿಗಳು ಹಾಗು ಅವರ ಪರಂಪರೆಯ ಶ್ರೀ ತೋಂಟದ ಸಿದ್ಧಲಿಂಗ ಯತಿಗಳು ಈ ಮಠದ ಬಳಿ ತಪೋನುಷ್ಠಾನ ಮಾಡಿ ಶಿಷ್ಯರಿಗೆ ದಾಹ ಅಡಗಿಸಿ ಸಾಗಿದರು. ಅದು ಕಾರಣ ಕುಡಿನೀರು ಕಟ್ಟೆಮಠ ಎಂಬ ಹೆಸರು ಪ್ರಚಲಿತವಾಯಿತಂತೆ ಎಂಬ ಸೂಚನೆಯನ್ನು ಆ ಮಠಾಧ್ಯಕ್ಷರಾದ ಶ್ರೀ ಮ.ನಿ.ಪ್ರ. ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು ನೀಡಿದರು. ಹೀಗೆಯೇ ಶಿವಗಂಗೆಯ ಬಳಿ ಚಿಕ್ಕಮಸ್ಕಲ್ ಮಠದಲ್ಲಿಯೂ ಗೋಸಲಾರ್ಯರು ತಪೋನುಷ್ಠಾನ



ಮಠದ ಹಿಂಬದಿಗೆ ಕುಡಿನೀರು ಕಟ್ಟೆ

ಮಾಡಿದರೆಂಬ ಐತಿಹ್ಯವಿದೆ. ಅಲ್ಲಿರುವ ಸಿದ್ದೇಶ್ವರ ಬೆಟ್ಟದಲ್ಲಿ ಅವರ ತೋರುಗದ್ದುಗೆ ಇದೆ ಎನ್ನಲಾಗಿದೆ. ಈ ಬಗ್ಗೆ ಮುಂದೆ ವಿವರಗಳನ್ನು ತಿಳಿಸಲಾಗುವುದು.

ಈ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಗೋಸಲ ಸಿದ್ದೇಶ್ವರರು ಸಿದ್ಧಗಂಗೆಗೆ ಬರುವ ಹಾದಿಯಲ್ಲಿ ಸಿಂಗ್ರೀಹಳ್ಳಿಯ ಮೂಲಕ ಬಂದು ಅಲ್ಲಿಯ ಬಂಡೆಗವಿಯಲ್ಲಿ ತಪೋನಿಷ್ಠರಾಗಿದ್ದರು. ಅವರ ಜೊತೆಗೆ ಮುತ್ತಿನ ಶೆಟ್ಟರು-ತಮಿಳು ಶಿವಭಕ್ತ ಶಿಷ್ಯರು ಗುರುಗಳನ್ನನುಸರಿಸಿ ಬಂದರು. ಶ್ರೀ ಗೋಸಲಸಿದ್ಧೇಶ್ವರರಲ್ಲಿ ಪಂಚೈದುಲಿಂಗಗಳಿಗೆ ಮಠಗಳನ್ನು ವಿಧಿಸಿದ ಪರಂಪರೆ ಇದ್ದ ಬಗ್ಗೆ (ಶಿವಸಂಕಾರೇಶ್ವರ, ಮಾದೇಶ್ವರ, ಪಂಡೇಶ್ವರ, ಸಿದ್ದೇಶ್ವರ,



ಹಸ್ತಿಸೋಪಾನವಿರುವ ಕುಡಿನೀರು ಕಟ್ಟೆ ವಿರಕ್ತಮಠಾಧ್ಯಕ್ಷ ಶ್ರೀ ಮ.ನಿ.ಪ್ರ ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು

ಬ್ರಹ್ಮೇಶ್ವರ) ಕ್ರಿ.ಶ.೧೩೪೫ರ ಹರದನಹಳ್ಳಿ ಶಾಸನದಿಂದಲೇ ಸೂಚನೆ ಒದಗುತ್ತದೆ. ಹೀಗಾಗಿ ಸಿಂಗ್ರೀಹಳ್ಳಿಯಲ್ಲಿ ಗೋಸಲಸಿದ್ಧೇಶ್ವರರ ಪಂಚಲಿಂಗೇಶ್ವರ ಆರಾಧನ ಪರಂಪರೆಯಿಂದ ಪ್ರೇರಣೆಗೊಂಡು ಭಕ್ತಜನತೆ ಪಂಚಲಿಂಗಗಳನ್ನು ಸ್ಥಾಪಿಸಿ, 'ಸಿಂಗ್ರೀಹಳ್ಳಿ ಪಂಚಲಿಂಗೇಶ್ವರ' ಸಂಕೇತವಾಗಿ ಐದು ಲಿಂಗಶಿಲೆಗಳನ್ನು ಸ್ಥಾಪಿಸಿದರು. ಹರದನಹಳ್ಳಿಯ (ಚಾಮರಾಜನಗರ, ೨೬೦) ಕ್ರಿ.ಶ.೧೩೬೮ರ ಶಾಸನೋಕ್ತ **ಅಮುಚವಾಡಿ ಕೊಂಗಗೌಡ** ದಿಬ್ಯಲಿಂಗ ಅಣಿಲೇಶ್ವರದೇವರ ಅಮೃತಪಡಿಗೆ ದಾನ ನೀಡಿದ ಸಂಗತಿ ಇದೆ. ಅಂತಾಗಿ ಕ್ರಿ.ಶ.೧೩೪೫-೫೦ರ ಸಮಯದಲ್ಲಿಯೂ 'ಕೊಂಗೇಗೌಡ' ಎಂಬ ಹೆಸರಿನ ಶಿಷ್ಯರೂ (ಅಣಿಲೇಶ್ವರ ದೇವರ ತಮಿಳು ಭಕ್ತರು) ಶ್ರೀ ಗೋಸಲಸಿದ್ಧೇಶ್ವರರ ಶಿಷ್ಯರ ತಂಡದಲ್ಲಿದ್ದರು. ಅವರ ಆಶಯವೂ ಕೂಡಿದಂತೆ 'ಕೊಂಗಮಲ್ಲೇಶ್ವರ' ಹೆಸರೂ ರೂಢಿಗೆ ನಿಂತಿತು. ಅದಕ್ಕೆ ಹರದನಹಳ್ಳಿಯ ಅಣಿಲೇಶ್ವರ ಲಿಂಗದ ಐತಿಹ್ಯಗಳೂ ಸೇರಿ ಜನರಲ್ಲಿ ಕತೆಗಳು ಇಂದಿನ ರೂಪದಲ್ಲಿ ಪ್ರಚಲಿತಗೊಂಡಿವೆ. ಗವಿಯಲ್ಲಿ ಇದ್ದ ಶಿವಲಿಂಗಗಳು (ಬಾಣಭಾಗ?) ಅಡುಗೆ ಒಲೆಯ ಜೋಡಣೆಯ ಬಗೆಯಲ್ಲಿಯೇ ಇದ್ದವು. ಜೀರ್ಣೋದ್ಧಾರ ಸಮಯದಲ್ಲಿ ಆ ಲಿಂಗಗಳ ಸ್ಥಳದಲ್ಲಿ ಪೂರ್ಣ ಶಿವಲಿಂಗಗಳನ್ನು ಒಲೆಯ ವಿನ್ಯಾಸದಂತೆ ಪ್ರತಿಷ್ಠಾಪಿಸಲಾಗಿದೆ. ಒಂದು ರೀತಿಯಲ್ಲಿ ಶಿವನ ಪಂಚಮುಖಗಳಾದ ಸದ್ಯೋಜಾತ(ಪಶ್ಚಿಮ ಮುಖ), ತತ್ಪುರುಷ(ದಕ್ಷಿಣ ಮುಖ), ವಾಮದೇವ(ಉತ್ತರ ಮುಖ), ಅಘೋರ(ದಕ್ಷಿಣ ಮುಖ) ಮತ್ತು ಈಶಾನ (ಆಕಾಶಮುಖ)ಮುಖಗಳ ಪ್ರಾತಿನಿಧಿಕವೆನ್ನುವಂತೆ ಈ ಸಾಂಕೇತಿಕ ಪಂಚಲಿಂಗಗಳನ್ನು

ಪರಿಭಾವಿಸಬಹುದು. ಇವುಗಳಲ್ಲಿ ಒಂದು ಶಿವಲಿಂಗಕ್ಕೆ ಹಳೆಯ ಬೆಣಚುಕಲ್ಲಿನ ಪಾಣಿವೆಟ್ಟವಿದ್ದು, ನೆಲದ ಮಟ್ಟಕ್ಕೆ ಹೊಂದಿಸಲಾಗಿದೆ. ಇದು ಹರದನಹಳ್ಳಿಯ 'ದಿಬ್ಬಲಿಂಗೇಶ್ವರ ಲಿಂಗ'ದ ಬೆಳಕಿನ ಸಂಕೇತವೆಂಬಂತಿದೆ. ಈ ಅಂಶಗಳೆಲ್ಲವು ಸಿದ್ದಗಂಗೆಗೆ ಶ್ರೀ ಗೋಸಲಸಿದ್ದೇಶ್ವರರು ಹೋಗುವಲ್ಲಿ ಸನಿಹದ ಸಿಂಗ್ರಿಹಳ್ಳಿ ಗವಿಯಲ್ಲಿ ತಪೋನುಷ್ಠಾನ ಮಾಡಿದ ಸಂದರ್ಭಕ್ಕೆ, ಐತಿಹ್ಯ ಲಭ್ಯ ಲಿಂಗದಾಕೃತಿಗಳಂಥ ಆಕರಗಳು ಪೋಷಣೆಯಾಗಿ ಕಂಡುಬರುತ್ತವೆ. ಶಿವನಲ್ಲಿ ವಿಶ್ವದ ಐದು ಮೂಲತತ್ತ್ವಗಳು ಅಂದರೆ ಪೃಥ್ವಿ, ಅಪ್ಪು, ವಾಯು, ತೇಜಸ್ಸು(ಅಗ್ನಿ), ಈಶಾನ ಇವು ಅವನ ಪಂಚವಕ್ತ್ರಗಳಲ್ಲಿ ಸಂಕೇತಗೊಂಡಿವೆ ಎನ್ನುವುದುಂಟು.

ಉತ್ತರ ಭಾರತದ ಭೀತಗ್ರಾಮದಲ್ಲಿ (ಲಕ್ನೋ ಮ್ಯೂಸಿಯಂನಲ್ಲಿ ಸಂರಕ್ಷಿತ), ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆಯ ಕಣವಿ ವೀರಭದ್ರಗುಡಿಯಲ್ಲಿ ಪಂಚಮುಖಲಿಂಗಗಳು ಕಾಣಬಂದಿವೆ. ಮಧ್ಯಪ್ರದೇಶದ ಉಜ್ಜಯನಿಯ ಪಿಂಗಳೇಶ್ವರದಲ್ಲಿ ಬುಡದಲ್ಲಿ ಸಕಲರೂಪದ ನಾಲ್ಕು ಶಿವವಕ್ತ್ರಗಳು ಅವುಗಳ ಮೇಲೆ ನಿಷ್ಕಲ ಲಿಂಗರೂಪ ಸೇರಿ ಶಿವನ ಪಂಚಮುಖ ಸಂಕೇತವನ್ನು ತೋರಿವೆ. ಆಂಧ್ರದ ಕೊಲ್ಲಿಪಾಕಿಯಲ್ಲಿ ಸೋಮೇಶ್ವರ ಗುಡಿಯಲ್ಲಿ ಷಟ್‌ವಕ್ತ್ರ ಶಿವಲಿಂಗವಿದೆ. ಕಾಶಿ ವಾರಣಾಸಿ ಜಂಗಮವಾಡಿ ಮಠದ


ಗವಿಪಂಚಲಿಂಗೇಶ್ವರ ಗುಡಿಯ ಮೂಲ ಶಿವಲಿಂಗದ ನೆಲೆ. ಒಲೆ ಆಕಾರದಲ್ಲಿ ಜೋಡನೆಯ ಶಿವಲಿಂಗಗಳು. ಹಿಂಬದಿ ಬಿತ್ತಿಯಲ್ಲಿ ನಾಗರ ಕಲ್ಲುಗಳು


ಪಂಚಲಿಂಗೇಶ್ವರ (ಕೊಂಗಮಲ್ಲೇಶ್ವರ) ಲಿಂಗ ಜೋಡಣೆಯ ನೋಟ

ನಿರ್ವಹಣೆಗಿರುವ ಸೂರ್ಯದೇಗುಲದಲ್ಲಿ ಲಿಂಗಶರೀರದಲ್ಲಿ ಪಂಚವಕ್ತ್ರದ ಏಕಪ್ರತೀಕವಾಗಿ ಸಕಲರೂಪದ (ಮುಖಮೂರ್ತಿ) ಶಿವನ ಸದ್ಯೋಜಾತ ವಕ್ತ್ರದ ಮೂಲಕ ಶಿಲ್ಪಿಸಲಾಗಿದೆ. ಹಾಸನ ಜಿಲ್ಲೆ ಮಳಲಿ ಗ್ರಾಮದ (ಹೊಳೆನರಸೀಪುರ ತಾ.) ಅರ್ಕೇಶ್ವರ ದೇಗುಲದ ವಿಮಾನ ಗೋಪುರದಲ್ಲಿ ಶಿವನ ಪಂಚವಕ್ತ್ರ ಸಂಕೇತವೆಂಬಂತೆ ಗಾರೆ ಅಚ್ಚಿನ ಪಂಚಕಲಶಗಳನ್ನು ಸದ್ಯೋಜಾತ ಮುಖದಿಂದ ಈಶಾನ ಮುಖದವರೆಗೆ ದಿಶಾಮುಖಿಗಳಾಗಿ ರೂಪಿಸಿರುವ ಅಪರೂಪದ ವಿಶಿಷ್ಟ ರಚನೆಯಾಗಿ ಕಾಣುತ್ತದೆ[೧೫]. ಸಿದ್ದಗಂಗೆಯಲ್ಲಿ ಚತುರ್ಮುಖ(ವಕ್ತ್ರದ) ಶಿವನ ಕಂಚಿನ ಮುಂಡದವರೆಗಿನ (ಅರೆದೇಹ) ಕಲಾತ್ಮಕ ವಿಗ್ರಹವಿದೆ. ಈ ಹಿನ್ನೆಲೆಗಳನ್ನು ಗಮನಿಸಿದರೆ ಏಕಲಿಂಗ ಶರೀರದ ಐದು ಮುಖಗಳಾಗಿ, ಪಂಚಕಳಶಗಳ ರೂಪದಲ್ಲಿ ಅಲ್ಲದೆ ಸಾಲಾಗಿ ಪಂಚಲಿಂಗಗಳನ್ನು ಜೋಡಿಸಿ ಪಂಚವಕ್ತ್ರ ಸ್ವರೂಪವನ್ನು ತಿಳಿಸುವ ಹಾಗೂ ಪಂಚೈದು ಲಿಂಗಗಳಿಗೆ ಪಂಚೈದು ಮಠಗಳಲ್ಲಿ ನೆಲೆ ಇಡುವ ಬಗೆಗೆ ಹರದನಹಳ್ಳಿಯ ಶಾಸನ ಸೂಚಿತ ಮಠಗಳೂ ಇರುವ ಸಂಪ್ರದಾಯ ಕಾಣಬರುತ್ತದೆ. ಇದಕ್ಕೆ ಮತ್ತೂ ವಿಶಿಷ್ಟವಾಗಿ, ಸಿಂಗ್ರೀಹಳ್ಳಿಯ ಬಂಡೆಗವಿಯ ಪಂಚಲಿಂಗೇಶ್ವರ ಗುಡಿಯ ಶಿವಲಿಂಗಗಳು ಅಡುಗೆ ಒಲೆಗಳ ರಚನಾಶೈಲಿಯಲ್ಲಿ ಪ್ರತಿಷ್ಠೆಗೊಂಡಿರುವುದು, ಹರದನಹಳ್ಳಿಯ ಐತಿಹ್ಯಕ್ಕೆ ಪೂರಕವಾದ ದೃಶ್ಯವಾಗಿದೆ. ಮೊದಲಿಗೆ ಮೂಲಲಿಂಗದ ರುದ್ರಭಾಗ (ಬಾಣಭಾಗ) ಮಾತ್ರ ಈ ರಚನಾ ಶೈಲಿಯಲ್ಲಿ ಜೋಡಣೆಗೊಂಡಿದ್ದುವಂತೆ. ಜೀರ್ಣೋದ್ಧಾರ ಸಂದರ್ಭದಲ್ಲಿ ಪೂರ್ಣ ಶಿವಲಿಂಗಗಳ ಮಾದರಿಯನ್ನು ಪ್ರತಿಷ್ಠಾಪಿಸಲಾಗಿದೆ. ಇವುಗಳಲ್ಲಿ ಅಡುಗೆಗೆ ಇಟ್ಟಿದ್ದ ದುಂಡುಶಿಲೆ ಎಂದು ಆ ಒಂದು ಶಿವಲಿಂಗದ ಪಾಣಿವಟ್ಟ ಬೆಣಚುಕಲ್ಲಿನದಾಗಿದ್ದು ನೆಲಮಟ್ಟಕ್ಕೆ ಅದರ ತಳವನ್ನು ಹೊಂದಿಸಲಾಗಿದೆ.

* ೧೫. ಡಾ. ಎಂ.ಜಿ. ನಾಗರಾಜ್, ಶಿವಾರಾಧನೆ ೨೦೧೨, ಶ್ರೀಮದ್ರಂಭಾಪುರಿ ಪೀಠ, ಬಾಳೆಹೊನ್ನೂರು, ಪು. ೩೦

*(ಮುಂದುವರೆಯುತ್ತದೆ)*





# ಮೌನದಲುಂಬುದು ಆಚಾರವಲ್ಲ !

– ಡಾ. ಬಿ.ಆರ್. ಚಿಲುಮೆ *

**ಮೌ**ನದಲುಂಬುದು ಆಚಾರವಲ್ಲ, ಆಚಾರವೇ ಸ್ವರ್ಗ–ಅನಾಚಾರವೇ ನರಕ; ಮರಣವೇ ಮಹಾನವಮಿ, ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಅಂದರೆ ಮರ್ತ್ಯಲೋಕ, ಸ್ವರ್ಗಲೋಕಗಳೆಂಬಿವು ಬೇರಿಲ್ಲ ಕಾಣಿರೋ; ಎಂದಂತೆ, ಸತ್ಯವ ನುಡಿಯುವುದೇ ಸ್ವರ್ಗ (ದೇವಲೋಕ), ಸುಳ್ಳು ಹೇಳುವುದೇ ಮರ್ತ್ಯಲೋಕ ಅಥವಾ ಭೂಲೋಕ, ಭೂ ಲೋಕದಲ್ಲಿದ್ದುಕೊಂಡೇ ಉಚಿತ ಬಾಳನ್ನು ಬಾಳಿ, ಜನಮನ ಮೆಚ್ಚುವಂತೆ, ದೇವನು ಮೆಚ್ಚುವಂತೆ ವರ್ತಿಸುವುದೇ ಮಾನವ ಧರ್ಮ. ಮಾನವ ಜನ್ಮ ತಾಳಿ ಬಂದ ಮೇಲೆ ಇಂತಹ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳದಿದ್ದರೆ ಹೇಗೆ ? ಎಂಬುದು ಮಹಾತ್ಮರುಗಳ ಚಿಂತೆ. ಸಂಸಾರ ಸಾಗರವೆಂಬುದು ಶಿರದುದ್ದ ನೋಡಾ ! ಎಂದಂತೆ ಬದುಕಿನಲ್ಲಿ ಏರಿಳಿತಗಳು, ನೋವು–ಸಂಕಷ್ಟಗಳು, ದುಃಖ–ದುಮ್ಮಾನಗಳು ಬರುವವೇ; ಆದರವುಗಳಿಗೆ ಅಧೀರರಾಗಬಾರದೆಂಬುದಾಗಿ ಬಸವಾದಿ ಶಿವಶರಣರು ೧೨ನೆಯ ಶತಮಾನದಲ್ಲಿಯೇ ನಮಗೆ ತಮ್ಮ ವಚನಗಳ ಮೂಲಕ ಧೈರ್ಯ ತುಂಬಿದ್ದಾರೆ. ಹಾಗಾದರೆ ನಾವು ಇಂದು ಏನು ಮಾಡುತ್ತಲಿದ್ದೇವೆ ? ಎಂಬುದರ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆಯಿಂದು.

ಬಸವಣ್ಣನವರು ಪ್ರತಿಪಾದಿಸಿದ ಪ್ರಸಾದಿಯ ಪ್ರಾಣಲಿಂಗಿ ಸ್ಥಳದಲ್ಲಿರುವ ೭೮೭ನೆಯ ವಚನದಲ್ಲಿ ಹೀಗೆಂದಿರುವರು.

**ಮೌನದಲುಂಬುದು ಆಚಾರವಲ್ಲ**
**ಅಂಗಾರ್ಪಿತವ ಮಾಡಿದ ಬಳಿಕ**
**ತುತ್ತಿಗೊಮ್ಮೆ ಶಿವಶರಣೆನುಡಿರಬೇಕು,**
**ಕರಣ ವೃತ್ತಿಗಳಡಗುವವು–**
**ಕೂಡಲ ಸಂಗನ ಶರಣರ ನೆನೆಯುತ್ತ ಉಂಡರೆ !**

ಬಹುಸಂಖ್ಯಾತ ಮಾನವರು, ನನ್ನನ್ನು ಸೇರಿಕೊಂಡು, ನಾನೇ ಮಾಡಿದೆ, ನಾನೇ ಕಟ್ಟಿಸಿದೆ, ನನ್ನಿಂದಲೇ ಇಷ್ಟೆಲ್ಲ ಆಸ್ತಿ ಸಂಪಾದನೆಯಾಯಿತು. ಧನಕನಕ, ದ್ರವ್ಯ, ಆಸ್ತಿ–ಪಾಸ್ತಿ, ಹೊಲ–ಮನೆ, ಭವ್ಯ ಬಂಗಲೆ, ಅರಮನೆ ನಿರ್ಮಿಸಿದೆ, ಮಠ, ಮಂದಿರಗಳಿಗೆ ದಾನ – ಈ ಮುಂತಾದ ಮಾತುಗಳನ್ನು ಆಡುತ್ತಿರುವವರನ್ನು ನಾವಿಂದು ಸದಾ ಕಾಣುತ್ತೇವೆ, ಕೇಳುತ್ತಿದ್ದೇವೆ. ಅಷ್ಟೇ ಅಲ್ಲ ದಾನ ಕೊಟ್ಟ ಬಗೆಯನ್ನು ಕಲ್ಲು–ಕಲ್ಲುಗಳ ಮೇಲೆ ತಮ್ಮ ಹೆಸರುಗಳನ್ನು ಇಂಥವರು ದೇಣಿಗೆ ಕೊಟ್ಟಿದ್ದು ಎಂಬುದಾಗಿ ಅಚ್ಚು ಹಾಕುವುದನ್ನು ಕಾಣುತ್ತೇವೆ. ಆದರದು ಶುದ್ಧ ಕಾಯಕದಿಂದ ಬಂದುದೋ, ಅಶುದ್ಧ ಕಾಯಕದಿಂದ ಬಂದುದೋ ಎಂಬುದು ಒತ್ತಟ್ಟಿಗಿರಲಿ, ಆದರೆ ಈ ಭೂಮಿಯ ಮೇಲೆ ಜನ್ಮ ತಳೆದುದು ಯಾರ ಕೃಪೆಯಿಂದ; ಯಾರ ಕರುಣೆಯಿಂದ ? ಎಂಬುದರ ಅರಿವು ಇರಲಿ ! ನಮ್ಮ ನಮ್ಮ ತಂದೆ–ತಾಯಿಗಳ ಮೂಲದಿಂದ ಬಂದರೂ, ಜೀವದಾನ ಕರುಣಿಸಿದವನೇ ಆ ಪರಮಾತ್ಮನು. ಅಂದ ಮೇಲೆ ಯಾವುದಕ್ಕೂ ಕಾರ್ಯ–ಕಾರಣ ಸಂಬಂಧವುಂಟೆಂದು ಹೇಳಿರಯ್ಯ! ಎಂಬುದು ಸತ್ಯ. ಪ್ರಪಂಚದ ಚರಾಚರ ವಸ್ತುಗಳೆಲ್ಲವು ಆ ಪರಮಾತ್ಮನ ಆಜ್ಞಾನುಸಾರವೇ ಜರುಗುತ್ತವೆ. "ತೃಣಮಪಿನ ಚಲತಿ ನಿನ್ನವಿನಾ" ಎಂಬಂತೆ! ಹಾಗೆಂದ ಮೇಲೆ ಸಕಲವನ್ನು ದಯಪಾಲಿಸಿದಂತಹ ಪರಶಿವನ ಆಜ್ಞಾಧಾರಕನ ಆಜ್ಞೆಯಂತೆ ನಡೆಯುವುದೇ ನಮ್ಮ ಕರ್ತೃವ್ಯವಲ್ಲವೆ ? ಯಾಕೆ "ನಾನು" ಎಂಬ ಆಹಂಕಾರದಿಂದ ಬೀಗುವುದು ? ಇದು ಮಾನವ ಜಾತಿಗೆ ಶೋಭೆ ತರುವಂತಹದ್ದಲ್ಲ. ಇದು ಯೋಗಿಗಳಿಗೂ, ಮಹಾತ್ಮರಿಗೂ, ವಿದ್ಯಾವಂತರಿಗೂ, ರಾಜಕಾರಣಿಗಳಿಗೂ, ಮಹಾತಪಸ್ವಿಗಳಿಗೂ, ಮಠಾಧೀಶರಿಗೂ, ಶಿಕ್ಷಕ–ವಿದ್ಯಾರ್ಥಿಗಳಿಗೂ, ಜೀವನೋಪಾಯಕ್ಕಾಗಿ ಮಾಡುವ ಯಾವುದೇ ಕಾಯಕ ವೃತ್ತಿಯವರಿಗೂ ಸಂಬಂಧಪಡುವಂತಹ ಮುತ್ತಿನಂಥ ಮಾತು ! ಆದುದರಿಂದ ನೀನೇ ದುಡಿದುಣ್ಣುತ್ತಿದ್ದರೂ ಮೌನದಿಂದ ಉಣ್ಣದೇ ಕೊಟ್ಟಾತನನ್ನು ಅಂದರೆ ನಿಮ್ಮ ನಿಮ್ಮ ಇಷ್ಟ ದೇವರುಗಳನ್ನು ಸ್ಮರಿಸಿಕೊಂಡು, ಅವರಿಗರ್ಪಿಸಿದ ನಂತರವೇ ನೀವು ಸೇವಿಸುವಂತವರಾಗ

* ಪ್ರಾಚಾರ್ಯರು (ನಿವೃತ್ತ), 'ಹೊಂಬೆಳಕು', ಮನೆ ನಂ. ೩, ಓಂ ಸ್ಕೂಲ್ ಹತ್ತಿರ, ಜಲದರ್ಶಿನಿ ನಗರ, ಧಾರವಾಡ ಮೊ: ೯೮೮೦೨೦೬೦೩೨

ಬೇಕು. ಈ ಪರಿಕಲ್ಪನೆ, ನೀತಿ ಸಂಹಿತೆಯನ್ನು ಪ್ರತಿಪಾದಿಸಿದವರು ಬಸವಾದಿ ಶರಣರು. ಮೊದಲಿಗರೆಂದು ಹೇಳಲಿಕ್ಕೆ ಯಾವುದೇ ಭಯವಿಲ್ಲ. ಅದೇ ರೀತಿಯಾಗಿ ಕಾಯಕ-ದಾಸೋಹ, ಅರಿವೇ ಗುರು, ತನ್ನ ಅರಿವೇ ತನಗೆ ಗುರು, ಪರೋಪಕಾರ ಗುಣ, ಸರ್ವಸಮಾನತೆ, ಸ್ತ್ರೀ ಸ್ವಾತಂತ್ರ್ಯ, ಅಸ್ಪೃಶ್ಯರಿಗೂ ದೇವಾಲಯಗಳ ಪ್ರವೇಶಕ್ಕೆ ಅವಕಾಶ, ಅಸ್ಪೃಶ್ಯನಾಗಲಿ, ವಿಪ್ರನಾಗಲಿ, ಯಾರೇ ಆಗಲಿ ಲಿಂಗದೀಕ್ಷೆ ಪಡೆದ ಬಳಿಕ ಸರ್ವರೂ ಸರಿಸಮಾನರು. ಅವರು ಎಲ್ಲದಕ್ಕೂ ಅರ್ಹರು ಎಂಬ ಪರಿಕಲ್ಪನೆಯನ್ನು ಮೊಟ್ಟ ಮೊದಲಿಗೆ ಜಾರಿಗೊಳಿಸಿದವರು ಬಸವಣ್ಣನವರು. ಅಂತೆಯೇ ಅವರು ಕರ್ನಾಟಕದ ಮಹಾತ್ಮರು ಎಂಬುದಾಗಿ ಕರೆಯಿಸಿಕೊಂಡರು. ಈ ಎಲ್ಲ ಕಾರಣಗಳಿಂದ ಭಾರತ-ದೇಶದ ಮೊಟ್ಟ ಮೊದಲ ಪ್ರಜಾಪ್ರಭುವಾಗಿದ್ದರು. ಲೋಕಸಭೆ, ರಾಜ್ಯಸಭೆ, ವಿಧಾನಸಭೆ, ವಿಧಾನಪರಿಷತ್ತುಗಳ ರಚನೆ ಬಸವಣ್ಣನವರು ನಿರ್ಮಿಸಿದ ಅನುಭವ ಮಂಟಪದ ಮಾದರಿಯನ್ನು ಅನುಸರಿಸಿದ್ದು! ಅದು ಕಾರಣದಿಂದಲೇ ಪಾರ್ಲಿಯಾಮೆಂಟ್ ಭವನದ ಮುಂದೆ ಏಕೈಕ ಮಹಾತ್ಮ ಶ್ರೀ ಬಸವೇಶ್ವರರ ಪುತ್ಥಳಿಯು ಪೂರ್ತಿವತ್ತಾಗಿ ಪ್ರತಿಷ್ಠಾಪನೆಗೊಂಡಿದೆ. ಮತ್ತಾವ ಮಹಾತ್ಮರ ಮೂರ್ತಿ ಮತ್ತಾವ ರಾಷ್ಟ್ರಗಳಲ್ಲಿ ಅಳವಟ್ಟುದುದು ಇಲ್ಲ. ೭೭೦ ಅಮರಗಣಂಗಳಿಂದೊಡಗೂಡಿದ "ಅನುಭವ ಮಂಟಪ" ಎಂಬುದು ೧೨ನೇ ಶತಮಾನದಲ್ಲಿ ನಿರ್ಮಿತಗೊಂಡ ಸಂಸತ್ತು ಈ ಜಗತ್ತಿನ ಯಾವ ರಾಷ್ಟ್ರದಲ್ಲಿಯೂ ಇಲ್ಲವೇ ಇಲ್ಲ. ಆದುದರಿಂದ ಶ್ರೀ ಜಗಜ್ಯೋತಿ ಬಸವೇಶ್ವರರನ್ನು ಈ ಜಗತ್ತಿನ ಮೊಟ್ಟ ಮೊದಲ ಪ್ರಜಾಪ್ರಭುತ್ವವಾದಿ, ಮೊಟ್ಟ ಮೊದಲ ಸಂವಿಧಾನ ಶಿಲ್ಪಿ, ಮೊಟ್ಟ ಮೊದಲ ಕಾಯಕ-ದಾಸೋಹಗಳ ಪ್ರತಿಪಾದಕ, ಸಮತಾ ತತ್ತ್ವ, ಸಹಕಾರ ತತ್ತ್ವ, ಸಹಪಂಕ್ತಿ ಭೋಜನ, ಇಷ್ಟಲಿಂಗದ ಪರಿಕಲ್ಪನೆ, ಸ್ತ್ರೀಯರಿಗೂ ಸರ್ವ ಕಾರ್ಯಗಳಿಗೂ ಪ್ರವೇಶಿಸುವ ಹಕ್ಕು. ಜನನ ಹೊಂದಿ ಈ ಭೂಮಿಯ ಮೇಲೆ ಬದುಕುವವರೆಲ್ಲರೂ ಸರಿಸಮಾನರು, ಲಿಂಗದೀಕ್ಷೆಯನ್ನು ಹೊಂದಿದಾತರು ಎಲ್ಲರೂ ಮನುಜರು, ಮಾನವ ಕುಲವೊಂದೇ ಒಂದು ಕುಲ; ಮೇಲು-ಕೀಳು ಎಂಬುದಿಲ್ಲವೇ ಇಲ್ಲವೆಂದು ಸಾರಿದರು. ಆದರೆ ಮನುಕುಲದ ನಡೆ-ನುಡಿ ಒಂದಾದ ಬದುಕಾಗಿರಬೇಕೆಂದರು. ಅದರಂತೆ ನಡೆದು-ನುಡಿದ ಆಚಾರ-ಪುರುಷರು ಬಸವಣ್ಣನವರು! ಅಂತಹ ಮಹಾನುಭಾವರು, ಮಹಾತ್ಮರು ಹೇಳಿದ ಇಂತಹ ನೀತಿ ಸಂಹಿತೆಗಳು ಅವರ ವಚನಗಳಲ್ಲಿ ಬೇಕಾದಷ್ಟಿವೆ. ಅವೆಲ್ಲವುಗಳಲ್ಲಿ ಒಂದಾದ "ಅಹಂಕಾರ (ನಾನು) ಒಂದನ್ನಾದರೂ ಬಿಟ್ಟು ಕಾಯಕ ಮಾಡಿ ಬಂದುದನ್ನು ಕೊಡಮಾಡಿದ ದೇವನನ್ನು ಸ್ಮರಿಸುತ್ತ, ಆತನಿಗರ್ಪಿಸಿಯೇ ಅನಂತರದಲ್ಲಿ ತಾನು ಭೋಗಿಸಬೇಕೆಂಬುದರ ಕುರಿತು ಇನ್ನೂ ಮೇಲಾದರೂ ಪಾಲಿಸಲು ಪ್ರಯತ್ನಿಸೋಣವಲ್ಲವೇ ?

ಆಸ್ಟ್ರೇಲಿಯಾ, ಅಮೇರಿಕಾ, ಜಪಾನ್-ಜರ್ಮನ್, ರಷ್ಯಾ, ಲಂಡನ್ ಈ ಮುಂತಾದ ರಾಷ್ಟ್ರಗಳಲ್ಲಿಯೂ ಬಸವಣ್ಣನವರ ಆದರ್ಶಗಳು, ತತ್ತ್ವ ಸಿದ್ಧಾಂತಗಳು ಮನೆ ಮಾತಾಗಿವೆ. ಆದರೆ ನಮ್ಮ ದೇಶದಲ್ಲಿಯೇ ಜನಿಸಿ ಪವಾಡವೆಸಗಿದ ಪುಣ್ಯಪುರುಷನನ್ನು ಮರೆತಿರುವುದು ವಿಷಾದನೀಯ! ಲಂಡನ್ನಿನ ಥೇಮ್ಸ್ ನದಿಯ ದಂಡೆಯ ಮೇಲೆ; ಲಂಡನ್ನಿನ ಭಾರತೀಯ ಪೌರತ್ವವನ್ನು ಹೊಂದಿದ ಡಾ. ನೀರಜ್ ಪಾಟೀಲರು, ಅಲ್ಲಿಯ ಜನತೆಯ ಮನಗೆದ್ದು ಶ್ರೀ ಬಸವೇಶ್ವರರ ಕಂಚಿನ ಪುತ್ಥಳಿಯನ್ನು ಪ್ರತಿಷ್ಠಾಪನೆಗೊಳಿಸಿದ್ದುದಲ್ಲದೆ ಆತನ ಆದರ್ಶಗಳನ್ನು ವಿಶ್ವಮಾನವ ಸಂದೇಶಗಳನ್ನು ಪ್ರಚುರಪಡಿಸಿದ್ದುದು ಶ್ಲಾಘನೀಯವಾದುದು. ಅಂತಹ ದಿವ್ಯ-ಭವ್ಯ ಮಹಾಮಾನವತಾವಾದಿಯ ಪ್ರತಿಮೆಯನ್ನು ಅನಾವರಣಗೊಳಿಸಲು ಹೋದವರು, ಭಾರತ ದೇಶದ ಪ್ರಧಾನಿ ನರೇಂದ್ರ ಮೋದಿಯವರು. ಇಂತಹ ಆದರ್ಶ ಮಾನವತಾವಾದಿಯ ಸಿದ್ಧಾಂತಗಳು ನಮ್ಮ ಕಣ್ಣ ಮುಂದೆ ವಚನಗಳ ರೂಪದಲ್ಲಿರುವಾಗ ಬೇರೆ ಬಾವಿ ತೆಗೆದು ಉಪ್ಪು ನೀರು ಸವಿಯುವ ಸಾಹಸವನ್ನೇಕೆ ಮಾಡಬೇಕು ? ಆದುದರಿಂದ ಮಾನವನಾಗಿ ಹುಟ್ಟಿ ಬಂದ ಮೇಲೆ, ಆ ಬದುಕನ್ನು ಪಾವನ, ಸಾರ್ಥಕಗೊಳಿಸಿಕೊಳ್ಳಲು ಪ್ರಯತ್ನಿಸಬೇಕಾಗಿದೆ. ಮನುಷ್ಯ ಜನ್ಮ ಧರಿಸುವುದೊಂದು ಪಾವನ. ಏಕೆಂದರೆ ಪಶು-ಪಕ್ಷಿ, ಪ್ರಾಣಿಗಳಿಗಿಂತಲೂ ಮಿಗಿಲಾದುದು ಈ ಮನುಷ್ಯನೆಂಬ ಪ್ರಾಣಿ. ಅವುಗಳಿಗಿಲ್ಲದ ವಿಚಾರವಂತಿಕೆ ಮನುಷ್ಯನಿಗಿದ್ದುದೊಂದು ಶ್ರೇಷ್ಠ ವರದಾನ. ಇದನ್ನು ಕರುಣಿಸಿದಾತನೇ ಆ ಪರಮಾತ್ಮನು! ಆ ಭಗವಂತನನ್ನು ಶಿವ, ವಿಷ್ಣು ಕೃಷ್ಣ ರಾಮ, ವಿಠ್ಠಲ, ಮಹೇಶ್ವರ, ಅಲ್ಲಾ, ಯೇಸು ಮುಂತಾದ ಹೆಸರುಗಳಿಂದ ಕರೆದು ಆರಾಧಿಸುತ್ತೇವೆ. ಆದರಿಂದ "ದೇವನೊಬ್ಬನೇ ಒಬ್ಬ - ನಾಮ ಹಲವು!" ಮನುಷ್ಯರಾದರೂ ಒಂದೇ ಎಂಬ ಭಾವನೆ ತಳೆದು ಮಾನವಕುಲವೊಂದೇ ಕುಲವೆಂದು ಭಾವಿಸುವುದು ಔಚಿತ್ಯವಿದೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಮಾನವೀಕರಣವೇ ಮುಖ್ಯವಾಗಿದೆ. ಆ ಜಾತಿ, ಈ ಜಾತಿ, ಆ ಪಕ್ಷ-ಪಂಗಡ, ಈ ಪಕ್ಷ-ಪಂಗಡಗಳೆಂಬ ಭೇದ-ಭಾವನೆಯನ್ನು ಮರೆತು ದೇಶದೊಳಿತಿಗಾಗಿ ಜಾಗತಿಕ ಕಲ್ಯಾಣಕ್ಕಾಗಿ ನಾವೆಲ್ಲರೂ ಗೌರವಿಸುವುದು, ಶ್ರಮಿಸುವುದು





ಇಂದಿನ ಕಾಲದ ಅಗತ್ಯತೆಯಾಗಿದೆ. ಆದುದರಿಂದ ಮಾನವನಾಗಿ ಹುಟ್ಟಿ ಬಂದ ಮೇಲೆ ಪಾವನ ಮಾಡಿಕೊಳ್ಳಲು ಪ್ರಯತ್ನಿಸಬೇಕು, ಮಾನವ ಶರೀರವನು ಹಾಳು ಮಾಡಿಕೊಳ್ಳಲು ಬೇಡಿ ಅಣ್ಣಗಳಿರಾ ?

ಮಾನವನ ಬದುಕು ಸಮಾಧಾನ-ಸಂತುಷ್ಟಿ-ಸಂತೃಪ್ತಿ-ಸಂತೋಷದಿಂದ ಕಳೆಯಬೇಕಾದರೆ ಬಸವಾದಿ ಶಿವಶರಣರ ವಚನಗಳು ದಾರಿದೀಪ, ತೋರು ದೀಪಗಳಾಗಿವೆ. ಅವು ಶ್ರೀಸಾಮಾನ್ಯನಿಗೂ ತಿಳಿಯುವಂತಿವೆ; ಸರಳ-ಸುಲಭವಾಗಿ ಅರ್ಥವಾಗುವಂತಿವೆ. ಆದರೆ ನಡೆಯಲ್ಲಿ ತರುವುದು ಬಲು ಕಠಿಣ. ಹೇಳಿದಷ್ಟು-ಕೇಳಿದಷ್ಟು ಸುಲಭವಲ್ಲದ ವಚನಗಳವು. ಅವು ಲಿಂಗಾಯತರ ವೇದಗಳಿದ್ದಂತೆ! ವೇದಾಗಮಗಳು ಸಂಸ್ಕೃತದಲ್ಲಿದ್ದರೆ ವಚನಗಳು ಕನ್ನಡ ನಾಡಿನ ತಿಳಿಗನ್ನಡದಲ್ಲಿರುವುದೊಂದು ವಿಶೇಷತೆ! ಆದುದರಿಂದ ವಿಶ್ವದ, ದೇಶದ, ನಾಡಿನ, ಹೊರನಾಡಿನ ಜನತೆಯೂ ಬಸವಣ್ಣನವರು ಕಟ್ಟಿದ ಕಲ್ಯಾಣದ ಅನುಭವ ಮಂಟಪದೆಡೆಗೆ ಧಾವಿಸಿ ಬಂದದುಂಟು, ೭೭೦ ಅಮರ ಗಣಂಗಳು, ೧,೯೬,೦೦೦ ಸದಸ್ಯರುಗಳನ್ನು ಒಂದೇ ಕಡೆಗೆ ಸಮಾವೇಶಗೊಳಿಸಿ ಸರ್ವ ಸಮಾನತೆಯ ಬೀಜ ಮಂತ್ರವನ್ನು ಬೋಧಿಸಿ ಜಾರಿಗೊಳಿಸಿದವರು ಬಸವಣ್ಣ! ಅಂತೆಯೇ ಅವರು ಸಮಾನತಾ ತತ್ತ್ವದ ರೂವಾರಿ ಎನಿಸಿಕೊಂಡರು. ಯೇಸು ಪ್ರೀತಿಯಿಂದ ಬದುಕಿರೆಂದ, ಬುದ್ಧ ಸಮತೆಯಿಂದ ಬದುಕಿರೆಂದ, ಮಹಾವೀರ ಸಮತೆಯನ್ನು ಸಾರಿದರು. ಆದರೆ ಸಮತೆಯ ತತ್ತ್ವವನ್ನು ಕಾರ್ಯಗತ ಅಥವಾ ಕ್ರಿಯಾಶೀಲಗೊಳಿಸಿದವರು ಬಸವಣ್ಣನವರು ಮಾತ್ರ. ಆದುದರಿಂದಲೇ ಅವರು ಜಗಜ್ಯೋತಿಯಾಗಿ ಬೆಳಗಿದರು, ಕಂಗೊಳಿಸಿದರು.

ಆದುದರಿಂದ ಬಸವಣ್ಣನವರ ಮಾತಿನಲ್ಲಿಯೇ ಹೇಳಬೇಕಾದರೆ ಈ ಮಾನವನ ದೇಹವೆಂಬುದು ಪ್ರಸಾದ ಕಾಯ, ದೇವಾಲಯವಿದ್ದಂತೆ. ಇಂಥ ಪವಿತ್ರ, ಪ್ರಸಾದ, ಪಾವನ ಕಾಯವನ್ನು ಕೆಡಿಸಿಕೊಳ್ಳಲಾರದೇ ಸಾರ್ಥಕ ಬದುಕಿಗೆ ಹವಣಿಸಬೇಕು. ಬಸವಣ್ಣನವರೇ ತಮ್ಮದೊಂದು ವಚನದಲ್ಲಿ ಹೇಳಿರುವಂತೆ -

**ಒಲ್ಲೆನೆಂಬುದು ವೈರಾಗ್ಯ, ಒಲಿವೆನೆಂಬುದು ಕಾಯಗುಣ**
**ಆವ ಪದಾರ್ಥವಾದರೇನು ? ತಾನಿದ್ದೆಡೆಗೆ ಬಂದುದನು**
**ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಆಚಾರ;**
**ಕೂಡಲ ಸಂಗಮದೇವನ ಒಲಿಸ ಬಂದ ಪ್ರಸಾದ;**
**ಕಾಯವಿದನು ಕೆಡಿಸಲಾಗದು.**

ಸಕಲ ಪಡಿ-ಪದಾರ್ಥಗಳೆಲ್ಲವನ್ನು ಆ ಪರಿಶಿವನೇ ಕೊಟ್ಟಿದ್ದಾನೆಂದು ತಿಳಿದುಕೊಂಡು ಲಿಂಗಧಾರಿಯಾದವನು ಲಿಂಗದೇವನಿಗರ್ಪಿಸಿ, ಅಥವಾ ತಮ್ಮ ತಮ್ಮ ಇಷ್ಟದೇವರುಗಳಿಗೆ ಅರ್ಪಿಸಿ, ಲಿಂಗ ಪ್ರಸಾದವೆಂದು ಭಾವಿಸಿ ಸೇವಿಸುವುದೇ ಶಿವಶರಣರ ಆಚಾರ-ವಿಚಾರವೆಂಬುದನ್ನು ಮರೆಯಕೂಡದು. ಈ ದೇಹವೆಂಬುದು ಶಿವನನ್ನು ಒಲಿಸಲಿಕ್ಕೆಂದು ಬಂದುದು, ಶಿವಾನುಗ್ರಹದಿಂದಲೇ ಪ್ರಾಪ್ತವಾದುದು. ಅದು ಕಾರಣ ಇಂಥದ್ದನ್ನು ತೆಗೆದುಕೊಳ್ಳುವುದಿಲ್ಲವೆಂಬ ವೈರಾಗದಿಂದಾಗಲಿ ಅಥವಾ ಇಂತಹುದೇ ಬೇಕೆಂಬ ಭೋಗೇಚ್ಛೆಯಿಂದಾಗಲಿ ಈ ದೇಹವನ್ನು ಕೆಡಿಸಿಕೊಳ್ಳಬಾರದೆಂಬ ಆಶಯವನ್ನು ಮೇಲಿನ ವಚನದಲ್ಲಿ ಹೇಳಿರುವರು. ಲಿಂಗಾರ್ಪಿತವ ಮಾಡಿದರೂ, ಕಾಯಕ ಮಾಡಿಯೇ ಅರ್ಪಿತವ ಮಾಡಬೇಕು. ಕಾಯಕದಲ್ಲಿ ನಿರತರಾಗಿಯೇ, ಕಾಯ ದಂಡಿಸಿ ಬಂದುದೇ ವರ ಪ್ರಸಾದವೆಂಬ ಭಾವವಿದರಲ್ಲಿದೆ. ತಾನೇ ದುಡಿದು ತಂದರೂ ನಾನೇ ಮಾಡಿದೆಂಬುದು ಭಾವವಿರಬಾರದು. ನಾನು ಮಾಡಿದೆನೆಂಬುದು ಮನದಲ್ಲಿ ಮೂಡಿದೊಡೆ ಏಡಿಸಿ-ಕಾಡಿತ್ತು ಶಿವನ ಡಂಗುರವೆಂದ ಬಸವ ವಾಕ್ಯವನ್ನು ನೆನಪಿಡಬೇಕು ನಾವು ನಿತ್ಯ !

ಕಾಯಕವ ಮಾಡಿಯೇ ಲಿಂಗಾರ್ಪಿತವ ಮಾಡಿ ತಣಿಯಬೇಕು. ಅಂಗವುಳ್ಳನ್ನಕ್ಕ ಶಿವಪೂಜೆಯ ಮಾಡಬೇಕು. ಆತ್ಮನ ಕ್ಷುಧೆಯುಳ್ಳನ್ನಕ್ಕ ಬಂದ ಪದಾರ್ಥವ ಲಿಂಗಾರ್ಪಿತವ ಮಾಡಬೇಕು. ಇದೇ ಅರಿವಿನ ಭತ್ತು, ಆಚಾರದ ತುತ್ತು, ಜ್ಞಾನದ ಗೊತ್ತು-ಸರ್ವಮಯದ ಯುಕ್ತಿ-ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವನರಿಯುವ ಶಕ್ತಿ ಎಂಬ ಶರಣರ ವಚನದಂತೆ ಜೀವನು ದೇಹವನ್ನು ಧರಿಸುವವರೆಗೂ ಶಿವಲಿಂಗವನ್ನು ಪೂಜಿಸಲೇಬೇಕು. ಜ್ಞಾನೋದಯವಾಯಿತೆಂದು ಕ್ರಿಯೆ ಬಿಡಬಾರದು. ಏಕೆಂದರೆ ಅವಿರಳಜ್ಞಾನಿ ಚೆನ್ನಬಸವಣ್ಣನವರು "ಜ್ಞಾನವೇ ಕ್ರಿಯೆ-ಕ್ರಿಯೆಯೇ ಜ್ಞಾನ" ಎಂದು ಹೇಳಿರುವುದನ್ನು ಗಮನಿಸಬೇಕು. ದೇಹ ಬಿಟ್ಟಾಗಲೇ ಕ್ರಿಯೆಯು ಅಡಗುವುದು. ದೇಹವಿರುವವರೆಗೂ ಹಸಿವು-ತೃಷೆಗಳಿರುವುದು ಸಹಜ. ಆದರೆ ಇಂಥವರು ಬೇಕು-ಇಂಥವರು ಬೇಡ ಎಂಬ ಆಗ್ರಹ ತೊಡದೇ; ಬಂದುದನ್ನು ಲಿಂಗಾರ್ಪಿತವ ಮಾಡಿ ಸೇವಿಸಬೇಕಾದುದೇ ಶಿವಾಚಾರದ ಜ್ಞಾನವಿದ್ದುದರ ಸಂಕೇತ. ಅದು ಕಾರಣ ಜೀವನವನ್ನು ಭೋಗದಲ್ಲಾಗಲಿ, ಬಳಕೆಂತುಲ್ಲಾಗಲಿ ತಳ್ಳದೇ ಶಿವಾನುಭವದಲ್ಲಿರಿಸಿದ್ದಾದರೆ ಕೊನೆಗೆ ಶಿವನಲ್ಲಿಯೇ ಸೇರುವ ಶಕ್ತಿಯನ್ನು ಹೊಂದಲು ಸಾಧ್ಯವಾಗುತ್ತದೆಯೆಂಬುದು ಶರಣರ

ನಿತ್ಯ ನಿಯಮ. ಆದ್ದರಿಂದ ನಾವೂ ಸಂಸಾರಸ್ಥರಾದರೇನಂತೆ ಬೇಕು–ಬೇಡೆಂಬ ಆಸೆಯಲ್ಲಿ ಬಿದ್ದು ಹೊರಳಾಡುವುದಕ್ಕಿಂತ ತಕ್ಕ ಮಟ್ಟಿಗೆ ಅಂದರೆ ಬದುಕಿಗಾಗಿ ಅನ್ನ ಸೇವಿಸುತ್ತ ಭಗವಂತನ ಕಡೆಗೆ ಮುಖ ಮಾಡುವುದೊಳಿತು. ಅಂದರೆ ಬದುಕುವುದಕ್ಕಾಗಿ ತಿನ್ನಬೇಕೇ ಹೊರತು ತಿನ್ನುವುದಕ್ಕಾಗಿಯೇ ಬದುಕಬಾರದು ಎಂಬುದರ ತಾತ್ಪರ್ಯ ! "ಸಾಕು ಎಂದವ ಸಾಹುಕಾರ–ಬೇಕು ಎಂದ ಭಿಕಾರಿ" ಆಗುತ್ತಾನೆಂಬ ಗಾದೆಯಿದೆ. ಆದುದರಿಂದ ಶರಣರು–ಸಂತರು–ಮಹಾತ್ಮರು–ಶಿವಯೋಗಿಗಳು, ದಾರ್ಶನಿಕರು, ಚಿಂತಕರು, ಬೇಕು–ಬೇಡೆಂಬ ಭವ ಬೀಜಗಳ ಹುರಿದು ಲೋಕದೊಳಗಿದ್ದು, ಇಲ್ಲದಂತಿರಬೇಕೆಂದು ಪ್ರತಿಪಾದಿಸಿದ ಮಾತುಗಳನ್ನು ನಾವು ಪಾಲಿಸುವುದೊಳಿತು ಎನ್ನಲಾಗಿದೆ. ಆದುದರಿಂದ ನಾವೆಲ್ಲ ಇನ್ನು ಮುಂದಾದರೂ ಆ ದೇವನು ಕರುಣಿಸಿದ ಪ್ರತಿಯೊಂದು ಪದಾರ್ಥವನ್ನು ದೇವನಿಗರ್ಪಿಸಿ ಸೇವಿಸುವುದೇ ಚೆನ್ನ, ಶ್ರೇಷ್ಠ, ಒಳಿತು. ಇದನ್ನೇ ಶರಣರು "ತುತ್ತಿಗೊಮ್ಮೆ ಶರಣೆನ್ನಿರೋ–ಕೊಟ್ಟ ದೇವನನ್ನು ಸ್ಮರಿಸಿರೋ" ಎಂದಿರುವುದನ್ನು ಗಮನಿಸಿ, ಅರ್ಥೈಸಿಕೊಂಡು ಬದುಕಬೇಕು. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೆಂದಂತೆ "ಒಂದು ತುತ್ತು ಅನ್ನದ ಹಿಂದೆ ಸಾವಿರಾರು ಜನರ ಶ್ರಮವಿದೆ, ದುಡಿತವಿದೆ" ಎಂಬ ಅವರ ಅಮರ ವಾಣಿಯನ್ನು ಸ್ಮೃತಿಪಟಲಕ್ಕೆ ತೆಗೆದುಕೊಳ್ಳುತ್ತಾ ಒಂದಗುಳನ್ನು ಕೆಡಿಸದಂತೆ ದೇವಾನ್ನವೆಂದೇ ಬಗೆದು ತಟ್ಟೆಯಲ್ಲಿರುವ ಅನ್ನವನ್ನು ಉಣ್ಣಬೇಕು. ಅನ್ನ ಹಾಳಾಗದಂತೆ ಕಾಳಜಿವಹಿಸುವುದು ನಮ್ಮೆಲ್ಲರ ಕರ್ತವ್ಯವಾಗಬೇಕು ಮತ್ತು ಕುಳಿತಾಗ, ನಿಂತಾಗ, ಮಲಗುವಾಗ, ಎದ್ದಾಗ ಆ ಪರಮಾತ್ಮನನ್ನು ನೆನೆನೆನೆದು ಮನಸ್ಸನ್ನು ಪ್ರಶಾಂತ ಸಾಗರವನ್ನಾಗಿಸಿಕೊಳ್ಳುವಲ್ಲಿ ಪ್ರತಿಯೊಬ್ಬರಿಂದ ಪಾಲಿಸಲೇಬೇಕಾದ ಅಗತ್ಯತೆಯಿದೆ. ಹಾಗಿರಲು ಪ್ರಯತ್ನಿಸೋಣವೆ ?

❑



## ವಿಶ್ವಪ್ರೇಮದ ಮಠವಿದು !

ಚೈತ್ರ ಯಾತ್ರೆಯು ಜೀವ ಭೂಮಿಯು
ಪಂಚತತ್ತ್ವವೆ ಸುಂದರಾ
ಲಿಂಗ ಗೊಂಚಲು ಅಂಗ ತಡಸಲು
ಜೀವ ಜಂಗಮ ಸೆಡಗರಾ

ಇಲ್ಲಿ ಬಂದರು ದೇವ ಗುರುಗಳು
ನೆಲವ ಮಲ್ಲಿಗೆ ಗೈದರು
ಹೂವು ಹಸಿರಿಗೆ ಗಾಳಿ ಬೆಳಕಿಗೆ
ಗಂಧ ಗಾಳಿಯ ತಂದರು

ಮಾತು ಮಂತ್ರಾ ನುಡಿಯು ಶಾಸ್ತ್ರಾ
ನಡೆಯು ಜಂಗಮ ಸ್ಥಳವಿದು
ಕಾಯ ಕರ್ಪೂರ ಜೀವ ಸುರಪುರ
ದೇವಗಾನದ ಗುಡಿಯಿದು

ಬಯಲು ಲಿಂಗಾ ಭಾವ ಲಿಂಗಾ
ಲಿಂಗತತ್ತ್ವದ ಗುಡಿಯಿದು
ಒಳಗು ಕನ್ನಡಿ ಹೊರಗು ಕನ್ನಡಿ
ಸಿದ್ಧ ಶರಣರ ತಟವಿದು
ವಿಶ್ವ ಪ್ರೇಮದ ಮಠವಿದು

– ಪ್ರೊ. ಜಿ.ಎಚ್. ಹನ್ನೆರಡುಮಠ

### ವಿಜಯದಶಮಿ

ಬನ್ನಿ ಮುಡಿಯುವ ಬಾರ ಕೋಲು ಕೋಲ ।
ಚಿನ್ನ ತರುವೋಣ ಬಾರ ಕೋಲು ಕೋಲ ॥
ಊರ ಸೀಮೆಯ ದಾಟಿ । ಕಾಡ ಗಡಿಯನು ಸೇರಿ
ಕಾಡ ಸಂಪತ್ತ ತರ ಬನ್ನಿ । ಬನ್ನಿ......
ಬೆಳೆದ ಬೆಳಸಿಗೆ ಬನ್ನಿ । ಭೂಮಿ ತಾಯಿಗೆ ಬನ್ನಿ
ನಾಡ ಸಂಪತ್ತ ಬೆರಿ ಬನ್ನಿ । ಬನ್ನಿ.....
ಅರಸನ ಅಂಗಳಕ ಸರಸ ರಂಗಾ ಹೊಯ್ದು
ಹೊರಸಿ ತಂದಾರ ಸಿರಿ ಬನ್ನಿ । ಬನ್ನಿ.....









# ಡೆವಿಲ್ಸ್ ಟವರ್ – ರಾಷ್ಟ್ರೀಯ ಸ್ಮಾರಕ ಅಮೆರಿಕ ಸಂಯುಕ್ತ ಸಂಸ್ಥಾನ (USA)

– ಬಿ.ನಂ. ಚನ್ನಪ್ಪ *

ಡೆವಿಲ್ಸ್ ಟವರ್ ಒಂದು ಪ್ರಮುಖವಾದ ಹಾಗೂ ಮಹತ್ವವಾದ ಭೂಗರ್ಭದ ಚಟುವಟಿಕೆಯ ಪರಿಣಾಮವಾಗಿ ರಚನೆಯಾದ ಶಿಲಾಗೋಪುರ. ಇದು ಅಮೆರಿಕ ಸಂಯುಕ್ತ ಸಂಸ್ಥಾನದ ವಯೋಮಿಂಗ್ ಪ್ರಾಂತದ ಈಶಾನ್ಯ ದಿಕ್ಕಿನ ಬ್ಲಾಕ್ ಹಿಲ್ಸ್ ಪ್ರದೇಶದ ಪ್ರಾಕೃತಿಕ ವಿಸ್ಮಯ. ಅಧ್ಯಕ್ಷ ಥಿಯೋಡೋರ್ ರೂಸ್‌ವೆಲ್ಟ್‌ರವರು ಇದೊಂದು ನಿಸರ್ಗದ ಹಾಗೂ ಭೂ ವಿಜ್ಞಾನಿಗಳ ಆಸಕ್ತಿಯ ಅಪರೂಪದ ರಚನೆಯೆಂದು ಪರಿಗಣಿಸಿ, ಸೆಪ್ಟಂಬರ್ ೨೪, ೧೯೦೬ರಲ್ಲಿ ಇದನ್ನು ಪ್ರಪ್ರಥಮ ರಾಷ್ಟ್ರೀಯ ಸ್ಮಾರಕವೆಂದು (National Monument) ಎಂದು ಘೋಷಿಸಿದರು. ಇದು ಸುತ್ತಲಿನ ಭೂ ಮಟ್ಟದಿಂದ ೧೨೦೦ ಅಡಿ ಮತ್ತು ತನ್ನ ಬುಡದಿಂದ ೮೬೭ ಅಡಿ ಎತ್ತರವಿದೆ. ಅಲ್ಲಿನ ಬುಡಕಟ್ಟು ಜನಾಂಗದವರು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಇದನ್ನು ಪವಿತ್ರವಾದುದೆಂದು ನಂಬಿದ್ದರು. ಇದು ಭೂಮಿಯಿಂದ ಆಕಾಶದವರೆಗೆ ನೇರವಾಗಿ ಎದ್ದು ನಿಂತಿರುವ ಕಲ್ಲಿನ ಸುಂದರ ಗೋಪುರ.

**ರಚನೆ :** ಇದು ಜ್ವಾಲಾಮುಖಿಯಿಂದ ನಿರ್ಮಾಣವಾಗಿದೆಯೆಂದು ಭೂಗರ್ಭ ಶಾಸ್ತ್ರಜ್ಞರ ನಂಬಿಕೆ. ಭೂ ಮಧ್ಯದ ಅತ್ಯಂತ ಹೆಚ್ಚಿನ ಶಾಖದ ಗಟ್ಟಿ ದ್ರವ (Molten Magma)ದ ಒತ್ತಡವು ರಾಕಿ ಪರ್ವತ ಪ್ರದೇಶವನ್ನು ಮೇಲಕ್ಕೆ ಎತ್ತಿದ ಪರಿಣಾಮವಾಗಿ, ಆ ದ್ರವವು ಜಲಜ ಶಿಲೆ ಅಥವಾ



ಪದರುಗಲ್ಲುಗಳ (Sedimentary rocks) ಸಂದುಗಳಿಗೆ ಪ್ರವೇಶ ಮಾಡಿ ಈ ಬಗೆಯ ರಚನೆಯಾಗಿದೆಯೆಂದು ಅಭಿಪ್ರಾಯಪಡಲಾಗಿದೆ.

**ಅಭಿಪ್ರಾಯಗಳು :** ಭೂಗರ್ಭ ಶಾಸ್ತ್ರಜ್ಞರಾದ ಕಾರ್ಪೆಂಟರ್ ಮತ್ತು ರಸಲ್‌ರವರ ಅಧ್ಯಯನದಂತೆ ಇಗ್ನಿಯಸ್ ಗಟ್ಟಿ ದ್ರವವು (Magma), ಹೆಚ್ಚಿನ ಶಾಖದಿಂದ ಮೇಲ್ಪದರ ಕಲ್ಲುಗಳ ಸಂದುಗಳಿಗೆ ಪ್ರವೇಶಿಸಿ ನಿರ್ಮಾಣವಾಗಿದೆಯೆಂದು ತೀರ್ಮಾನಕ್ಕೆ ಬಂದರು. ಡಾರ್ಟನ್ ಮತ್ತು ಓ'ಹಾರ ಎಂಬುವ ಭೂ ವಿಜ್ಞಾನಿ ಹೆಚ್ಚು ಕಡಿಮೆ ಇದೇ ಅಭಿಪ್ರಾಯಕ್ಕೆ ಬಂದಿದ್ದರು. ಕೆಲವರು ಇದು ಜ್ವಾಲಾಮುಖಿಯ ಬೆಣೆ ಅಥವಾ ಗೂಟ (Plug) ಇರಬಹುದೆಂದು ಭಾವಿಸಿದರು. ಒಟ್ಟಿನಲ್ಲಿ ಶಿಲಾರಸವು (Molten Magma) ಮೇಲಿನ ಕಲ್ಲಿನ ಪದರಗಳಿಗೆ ಪ್ರವೇಶ ಮಾಡಿದ್ದರಿಂದ(Intrusion into sedimentary layers), ಅಗಿದೆಯೆಂದು ಎಲ್ಲರೂ ಒಪ್ಪುತ್ತಾರೆ.

ಶಿಲಾರಸಸವು ತಣ್ಣಗಾದ ಮೇಲೆ, ತಿಳಿ, ಕಡು ಬೂದು ಅಥವಾ ಹಸಿರು ಬಣ್ಣದ (Black grey or greenish grey) ಬಿಳಿ ಫೆಲ್ಡ್‌ಸ್ಪಾರ್‌ನ ಸ್ವಚ್ಛ ಹರಳುಗಳಿಂದ ಕೂಡಿರುವುದನ್ನು ನೋಡಬಹುದು. ಚಲಿಸುವ ಶಿಲಾರಸವು ತಣ್ಣಗಾಗುವಾಗ ಸಂಕುಚಿತಗೊಂಡು ಷಡ್ಭುಜಾಕೃತಿಯ (ಕೆಲವು ೪, ೫, ೭ ಭುಜಗಳು) ಬಿರುಕುಗಳನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು.

ಈ ಕಲ್ಲಿನ ಗೋಪುರವು ಗಟ್ಟಿಯಾದ ಇಗ್ನಿಯಸ್ ಕಲ್ಲಿನಿಂದಾಗಿರುವುದರಿಂದ ಸುತ್ತಲಿನ ಭೂಮಿಯಲ್ಲಿನ ಮೆದುವಾದ ಸ್ಯಾಂಡ್ ಸ್ಟೋನ್ ಮತ್ತು ಷೇಲ್ ಕಲ್ಲುಗಳ ಸಾವಿರಾರು ವರ್ಷಗಳ ಸವೆತದಿಂದ ಎದ್ದು ಕಾಣುತ್ತಿದೆ. ಡೆವಿಲ್ಸ್ ಗೋಪುರವು ಇಂದಿಗೂ ಮಳೆ, ಬಿಸಿಲು ಮತ್ತು ಗಾಳಿಯಿಂದ ಸವೆತಕ್ಕೊಳಗಾಗುತ್ತಿದೆ. ಸಣ್ಣ ಸಣ್ಣ ಬಂಡೆಗಳು ಬೀಳುತ್ತಿದ್ದು ಬುಡದಲ್ಲಿ ಶೇಖರಣೆಯಾಗುತ್ತಿವೆ. ಇದರ ಅರ್ಧಯುಗಾಂತರದಲ್ಲಿ ಇದರ ಅಸ್ತಿತ್ವ ಇಲ್ಲವಾಗಬಹುದು.

* ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೫, ೧೧ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್‌ರಸ್ತೆ, ೨ನೇ ಹಂತ, ಬೆಂಗಳೂರು–೫೬೦ ೦೮೬



ಈ ಪ್ರದೇಶವು ಎತ್ತಲ್ಪಟ್ಟು, ಸುತ್ತಲ ಭೂ ಪ್ರದೇಶದಿಂದ ಭಿನ್ನವಾಗಿದ್ದು, ಹವೆಯೂ ಹಿತಕರವಾಗಿದೆ.

**ಸಸ್ಯವರ್ಗ :** ಮುಖ್ಯವಾಗಿ ಇಲ್ಲಿ ಪಾಂಡೆರಾಸ್‌ಪೈನ್ ಮರಗಳು ದಟ್ಟವಾಗಿ ಬೆಳೆಯುತ್ತವೆ. ಕಡು ಹಸಿರು ಬಣ್ಣದಿಂದ ಕಪ್ಪಗೆ ಕಾಣುವುದರಿಂದ, ಈ ಪ್ರದೇಶಕ್ಕೆ ಬ್ಲಾಕ್ ಹಿಲ್ಸ್ ಎಂದು ಹೆಸರಾಗಿದೆ. ಈ ಮರಗಳು ಭೂಮಿಯ ಆಳದ ನೀರನ್ನು ಹೆಚ್ಚು ಉಪಯೋಗಿಸುತ್ತವೆ. ಇವಲ್ಲದೆ ಸೂಚಿಪರ್ಣಿಕಂಟಿಗಳು, ಎಲ್ಮ್, ಆಸ್ಪನ್, ಓಕ್, ಕಾಟನ್‌ವುಡ್, ಮಹೋಗನಿ ಮರಗಳಲ್ಲದೆ, ಚೋಕ್ ಚರ್ರಿ ಮತ್ತು ಸ್ನೊ ಚೆರ್ರಿ ಪೊದೆಗಳು ಬೆಳೆಯುತ್ತವೆ.

**ಕಾಡುಪ್ರಾಣಿಗಳು :** ಈ ಪ್ರದೇಶದಲ್ಲಿ ಕೊಯೋಟಿಸ್, ಸ್ಕಂಕ್ಸ್, ರ್‍ಯಾಕೂನ್ಸ್, ಜಿಂಕೆ, ತೋಳ ಮತ್ತು ಪ್ರೈರಿ ನಾಯಿಗಳು ವಾಸಿಸುತ್ತವೆ. ಸ್ನೇಹಪರ ಪ್ರೈರಿ ನಾಯಿಗಳು ಇಲಿ ಜಾತಿಗೆ ಸೇರಿದ್ದು, ಹೆಚ್ಚು ಜನ ಸಾಂದ್ರತೆ ಇರುವ ನಗರಗಳಲ್ಲಿಯೂ ವಾಸ ಮಾಡುತ್ತಿವೆ.

**ಗೋಪುರದ ವಿವರಗಳು :** ಈ ರಾಷ್ಟ್ರೀಯ ಸ್ಮಾರಕವು ೧೩೪೭ ಎಕರೆ ಜಾಗವನ್ನು ಆಕ್ರಮಿಸಿದೆ. ಗೋಪುರದ ಮೇಲ್ಭಾಗವು ಚಪ್ಪಟೆಯಾಗಿದ್ದು ೧ ೧/೨ ಎಕರೆ ಅಗಲವಿದೆ ಹಾಗೂ ೧೦೦೦ ಅಡಿ ಸುತ್ತಳತೆ ಹೊಂದಿದೆ. ಇದನ್ನು ಬೆಟ್ಟ ಹತ್ತುವ ಸಾಹಸಕ್ಕಾಗಿ ಉಪಯೋಗಿಸುತ್ತಾರೆ (Hill climbing). ಇಲ್ಲಿ ೨೦೦ ಹತ್ತುವ ದಾರಿಗಳಿವೆ, ದಕ್ಷಿಣದ ಡ್ಯೂರೆನ್ಸ್ (Durence) ಎಂಬ ದಾರಿಯು ಜನಪ್ರಿಯವಾಗಿದೆ. ಇದರ ಕಲ್ಲಿನಲ್ಲಿರುವ ಫೆಲ್ಡ್ ಸ್ಪಾರ್ ಹರಳುಗಳು ಸೂರ್ಯನ ಬೆಳಕಿನಲ್ಲಿ ಪ್ರಕಾಶಿಸುತ್ತವೆ.

೧೯೪೧ರಲ್ಲಿ ಜಾನ್ ಹಾಪ್ಕಿನ್ಸ್ ಎಂಬುವವನು ಪ್ಯಾರಾಚೂಟ್‌ನಲ್ಲಿ ಶಿಖರದ ಮೇಲೆ ಇಳಿದು ಅಲ್ಲಿ ಆರು ದಿನಗಳಿದ್ದನು. ೧೯೮೩ರಲ್ಲಿ ವಿಲಿಯಂ ರೋಡ್ಜರ್ಸ್ ಮತ್ತು ವಿಲ್ಲಾರ್ಡ್ ರಿಪ್ಲೆ ಎಂಬುವವರು ಪ್ರಪ್ರಥಮವಾಗಿ ೮೫೦ ಎತ್ತರದ ಏಣಿ ಉಪಯೋಗಿಸಿ ಮೇಲೆ ಹತ್ತಿದ್ದರು. ೧೯೮೫ರಲ್ಲಿ ರೋಡ್ಜರ್ಸ್‌ನ ಹೆಂಡತಿ ಲಿನ್ನಿ, ಶಿಖರ ಭಾಗಕ್ಕೆ ಏಣಿ ಮುಖಾಂತರ ಹತ್ತಿದ ಪ್ರಥಮ ಮಹಿಳೆ. ಸ್ಟೀವನ್ ಸ್ಪೀಲ್‌ಬರ್ಗ್ ನಿರ್ದೇಶನದ ಮಹಾಚಿತ್ರ ಕ್ಲೋಸ್ ಎನ್‌ಕೌಂಟರ್ಸ್ ಆಫ್ ದಿ ಥರ್ಡ್ ಕೈಂಡ್ (Close encounters of the third kind) ಎಂಬ ಚಿತ್ರೀಕರಣದ ಮೂಲಕ ಲಕೋಪಲಕ್ಷ ಜನರಿಗೆ ಇದರ ಪರಿಚಯವಾಯಿತು.

ಈ ನಿಸರ್ಗದ ಗೋಪುರದ ಸುತ್ತ ೭೦೦೦ ಮೈಲಿಗಳಷ್ಟು ಕಾಲು ದಾರಿಗಳಿವೆ. ಇಲ್ಲಿರುವ ಪ್ರವಾಸಿ ಕೇಂದ್ರ (visitor centre) ಮತ್ತು ಸೇವಾ ಕೇಂದ್ರದವರು ಇದರ ಇತಿಹಾಸ, ಬೆಟ್ಟ ಹತ್ತುವ ಪ್ರಾತ್ಯಕ್ಷಿಕೆ ಮತ್ತು ಕಾರ್ಯಕ್ರಮಗಳ ಬಗ್ಗೆ ತಿಳುವಳಿಕೆ ನೀಡುತ್ತಾರೆ. ಇಲ್ಲಿ ಪ್ರತಿವರ್ಷ ಸ್ಟರ್ಗಿಸ್ ಮೋಟಾರ್ ಬೈಕ್ ರ್‍ಯಾಲಿ ನಡೆಯುತ್ತದೆ. ೪ ಲಕ್ಷ ಬೈಕ್‌ಗಳು ಮತ್ತು ಪ್ರೇಕ್ಷಕರು ಸೇರುತ್ತಾರೆ. ಪ್ರತಿವರ್ಷ ಲಕ್ಷಾಂತರ ಪ್ರವಾಸಿಗಳು, ಸಾಹಸಿಗಳು ಇಲ್ಲಿಗೆ ಬರುತ್ತಾರೆ.

ಇದೊಂದು ನಿಸರ್ಗದ ವಿಸ್ಮಯ. ಈ ಬದುಕು ಪ್ರಕೃತಿಯ ಕೊಡುಗೆ. ಪ್ರಕೃತಿಯ ಸುಂದರ ತಾಣಗಳ ದರ್ಶನವೇ ಬದುಕಿನ ಸಾರ್ಥಕತೆ. ಇಂತಹ ಒಂದು ಅವಕಾಶ ಸಾಧ್ಯವಾದರೆ ಎಲ್ಲ ಸೌಂದರ್ಯೋಪಾಸಕರಿಗೆ ಸಿಗಲಿ ಎಂಬುದು ನಮ್ಮ ಹಾರೈಕೆ.





'ಸಾಹಿತ್ಯ ಲೋಕದ ಸೋಜಿಗ'

# ಪೂಜ್ಯ ಡಾ. ಶ್ರೀ ಜ.ಚ.ನಿ.

– ಎಚ್.ಎಸ್. ಸಿದ್ಧಗಂಗಪ್ಪ *

**ಮು**ನ್ನೂರ ಐವತ್ತಕ್ಕೂ ಹೆಚ್ಚು ಶ್ರೇಷ್ಠ ಕೃತಿಗಳನ್ನು ನೀಡಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತ ಗೊಳಿಸಿದವರು ಪೂಜ್ಯ ಡಾ. ಜ.ಚ.ನಿ. ಅವರು. ಒಂದು ಧಾರ್ಮಿಕ ಪೀಠದ ಪೀಠಾಧ್ಯಕ್ಷರಾಗಿ ಇಷ್ಟೊಂದು ಮೌಲಿಕ ಕೃತಿಗಳನ್ನು ನೀಡಿದವರು ಭಾರತದ ಧಾರ್ಮಿಕ ಇತಿಹಾಸದಲ್ಲಿ ಮತ್ತೊಬ್ಬರು ಪೀಠಾಧಿಪತಿಗಳಿರುವುದು ನನ್ನ ಗಮನಕ್ಕೆ ಬಂದಿಲ್ಲ. ಒಂದು ಮಠದ ಪೀಠಾಧಿಪತಿಯಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸುವುದರ ಜೊತೆಗೆ ನಿರಂತರವಾದ ಅಧ್ಯಯನದಿಂದ ಮೂಡಿಬಂದ ಚಿಂತನೆಗಳನ್ನು ಅಕ್ಷರ ರೂಪದಲ್ಲಿ ದಾಖಲಿಸಿದ್ದಾರೆ. ಇಡೀ ತಮ್ಮ ಜೀವನವನ್ನು ಸಾಹಿತ್ಯ ಮತ್ತು ಆಧ್ಯಾತ್ಮ ಕೃಷಿಗೆ ತಮ್ಮನ್ನು ಅರ್ಪಿಸಿಕೊಂಡು ವಿದ್ವತ್ ವಲಯ ಅಚ್ಚರಿಪಡುವಂತಹ ಸಮೃದ್ಧವಾದ ಸಾಹಿತ್ಯ ಸಂಪತ್ತನ್ನು ನೀಡಿದರೂ, ವಿಶಿಷ್ಟ ಸಾಧನೆ ಮಾಡಿದರೂ ಅವರ ಅಮೂಲ್ಯ ಸೇವೆಯ ಘನತೆ ಕರ್ನಾಟಕದ ಗಡಿಯನ್ನು ದಾಟಲಿಲ್ಲ ಎಂದು ಹೇಳಲು ವಿಷಾದವಾಗುತ್ತದೆ. ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪನವರು "ಶ್ರೀ ಸನ್ನಿಧಿಯವರ ಕೃತಿಗಳು ಮೌಲ್ಯದಿಂದ ಕೂಡಿದ್ದರೂ ವಿಮರ್ಶಕರು, ಸಾಹಿತಿ ವಿದ್ವಾಂಸರ ಅವಕೃಪೆಗೆ ಒಳಗಾದದ್ದು ನಿಜಕ್ಕೂ ಒಂದು ದುರಂತ" ಎಂದು ಹೇಳಿರುವುದು ಚಿಂತನೆ ಮಾಡುವಂತಿದೆ. ಅವರು ಹೇಳಿದಂತೆ ಕಮರ್ಷಿಯಲ್ ವಿದ್ವಾಂಸರು ತಮ್ಮಲ್ಲಿನ ಸಂಕುಚಿತ ಭಾವನೆಯಿಂದ ಹೊರಬಂದು ಯಾವುದೇ ರೀತಿಯಲ್ಲಿ ಪೂರ್ವಾಗ್ರಹ ಪೀಡಿತರಾಗದೆ ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದ್ದರೆ ಅವರು ಬರೆದ ಕೆಲವು ಗ್ರಂಥಗಳನ್ನಾದರೂ ಇಂಗ್ಲೀಷ್, ಹಿಂದಿ ಭಾಷೆಗಳಿಗೆ ಅನುವಾದ ಮಾಡಿದ್ದರೆ ಅವರಿಗೆ ಜ್ಞಾನಪೀಠ ಪ್ರಶಸ್ತಿಯಲ್ಲದೆ ನೊಬೆಲ್ ಪ್ರಶಸ್ತಿಯೂ ದೊರೆತು ಕನ್ನಡ ಸಾಹಿತ್ಯದ ಕೀರ್ತಿ ವಿಶ್ವಮಟ್ಟದಲ್ಲಿ ಪಸರಿಸುವಂತಾಗುತ್ತಿತ್ತು. ಈಗಲಾದರೂ ಅವರ ಆಯ್ಕೆ ಮಾಡಿದ ಕೆಲವು ಗ್ರಂಥಗಳನ್ನು ಭಾರತೀಯ ಭಾಷೆಗಳಿಗೆ ಅನುವಾದ ಮಾಡಿಸಿ ಪ್ರಕಟಿಸಿದರೆ ಪೂಜ್ಯ ಸನ್ನಿಧಿಯವರ ಕೊಡುಗೆಯ ಪರಿಚಯವಾಗುತ್ತದೆ.

ಈ ಕಿರು ಲೇಖನದಲ್ಲಿ ಡಾ. ಜ.ಚ.ನಿ. ಅವರ ಘನಶಿವ ವ್ಯಕ್ತಿತ್ವವನ್ನು ಪರಿಚಯ ಮಾಡಿ ಕೊಡುವುದು ತುಂಬಾ ಕಷ್ಟದ ಕೆಲಸ. ಯಾವುದರ ಬಗ್ಗೆ ಬರೆಯುವುದು ಎಂಬ ಜಿಜ್ಞಾಸೆ ಉಂಟಾಗುತ್ತದೆ. ಅವರನ್ನು ಪರಿಚಯ ಮಾಡಿಕೊಡುವುದು ಗಿಂಡಿಯಲ್ಲಿ ಗೊಮ್ಮಟನಿಗೆ ಅಭಿಷೇಕ ಮಾಡಿದಂತೆ, ಕರಿಯನ್ನು ಕನ್ನಡಿಯಲ್ಲಿ ಅಡಗಿಸಿದಂತಾಗುತ್ತದೆ.

**ಜನನ :**

ಶ್ರೀ ಜ.ಚ.ನಿ. ಅವರು ಹುಟ್ಟಿದ್ದು ಬೆಳಗಾವಿ ಜಿಲ್ಲೆ, ಬೈಲವಂಗಲ ತಾಲ್ಲೂಕು, ಅಂಬಡಗಟ್ಟಿ ಗ್ರಾಮ. ಹಡೆದ ಪುಣ್ಯಜೀವಿಗಳು ತಂದೆ ಹಿರೇಮಠದ ದುಂಡಯ್ಯ, ತಾಯಿ ತಾಯವ್ವ, ಹುಟ್ಟಿದ್ದು ದಿನಾಂಕ ೨೯ ಸೆಪ್ಟೆಂಬರ್, ೧೯೦೯. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ರಾಚಯ್ಯ.

ಹುಟ್ಟಿದ ಇಬ್ಬರು ಗಂಡು ಮಕ್ಕಳು ತೀರಿಕೊಂಡ ನಂತರ ಹುಟ್ಟಿದ ರಾಚಯ್ಯನ ಬಗ್ಗೆ ಅಪಾರವಾದ ಪ್ರೀತಿ, ಅಕ್ಕರೆ. ಬಹುಮುದ್ದಿನಿಂದಲೇ ಬೆಳೆಸಿದರು. ತಾಯವ್ವೆಯ ಹೆತ್ತಕರುಳು ತನ್ನ ಪ್ರೀತಿಯ ಕಂದ ಸುಖವಾಗಿರಬೇಕು, ಯಾವುದೇ ರೀತಿಯ ಕಷ್ಟಗಳು ಅವನ ಹತ್ತಿರ ಸುಳಿಯಬಾರದು ಎಂದು ಹಂಬಲಿಸುತ್ತಿದ್ದಳು. ಕೋಳಿ ಕೂಗುವ ಮುನ್ನವೇ ಎದ್ದು ನಾಳಿನ ಹಿಟ್ಟಿಗಾಗಿ ಕಾಳನ್ನು ಬೀಸುತ್ತಾ ತೊಡೆಯ ಮೇಲೆ ಮಲಗಿರುವ ಕರುಳ ಕುಡಿಯನ್ನು ಕಾಪಾಡುವಂತೆ ತನ್ನ ಆರಾಧ್ಯದೈವ ಶಿವನಲ್ಲಿ ಭಕ್ತಿಯಿಂದ ನಿವೇದಿಸಿಕೊಳ್ಳುತ್ತಿದ್ದಳು.

**ಮಂದರಗಿರಿಯಲ್ಲಿ ಚೆಂದದಿ ಕುಳಿತಂತೆ**
**ಸುಂದರ ಶಿವನೆ ಬಾ ನನ್ನ ಮನೆಗೆ**
**ಬಂದ್ಯೆನ್ನ ಕಂದನ ಕಾಪಾಡು ತಂದೆ ।**

ಎಂತಹ ಸುಂದರವಾದ ಕಲ್ಪನೆ ! ಆ ತಾಯಿಯ ಪ್ರಾರ್ಥನೆಯಲ್ಲಿ ತನ್ನ ಕಂದನ ಬಗ್ಗೆ ಉತ್ಕಟವಾದ ಮಮತೆ, ಪ್ರೀತಿ, ವಾತ್ಸಲ್ಯದ ಸಿಂಚನವಿದೆ. ಹಿಮಾಲಯ ಪರ್ವತದಲ್ಲಿ ಚೆಂದವಾಗಿ ಕುಳಿತಿರುವ ಸುಂದರ ಶಿವನನ್ನು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧

ಮಂಗಳಮೂರ್ತಿಯಾಗಿ ಕಂಡು ತನ್ನ ನಾಡಿಗೆ ತನ್ನ ಮನೆಗೆ ಬಂದು ತನ್ನ ಕಂದನನ್ನು ಹರಸಿ ದಾರಿ ತೋರಿಸಬೇಕು ಎಂದು ತಾಯಿಯ ಹೃದಯ ಹಂಬಲಿಸಿರುವುದು ವ್ಯಕ್ತವಾಗುತ್ತದೆ. ಕಂದನ ಮೇಲಿನ ಹದುಳವಾದ ದೃಷ್ಟಿಯಿಂದ ಶಿವನ ಮೇಲಿನ ಮುಗ್ಧ ಭಕ್ತಿಯಿಂದ, ಸ್ವಯಂ ಸ್ಫೂರ್ತಿಯಿಂದ ಕಟ್ಟಿ ಹಾಡಿದ ಹಾಡು, ಎಲ್ಲ ತಾಯಂದಿರ ಆಶಯವನ್ನು ಪ್ರತಿನಿಧಿಸುತ್ತದೆ. ಈ ಹಾಡು ಬರಿ ಹಾಡಾಗಿ ಉಳಿಯದೆ ರಾಚಯ್ಯ ಆಧ್ಯಾತ್ಮಿಕ ಕ್ಷೇತ್ರಕ್ಕೆ ಪ್ರವೇಶಿಸಲು ನಾಂದಿಯಾಯಿತು.

ತಂದೆ ದುಂಡಯ್ಯ ಹಿರೇಮಠ ಅವರು ಊರಿನ ಹಿರಿಯ ಬುದ್ಧಿವಂತರಾಗಿದ್ದರು. ಸುಸಂಸ್ಕೃತರು. ಗುರುಗಳ ಒಂದು ಕೊಂಕು ನುಡಿಯಿಂದ ಬೇಸತ್ತು ಶಾಲೆ ತೊರೆದು ಸ್ವಯಂ ವಿದ್ಯಾವಂತರಾದ ಸ್ವಾಭಿಮಾನಿ. ಅಂಬಗಟ್ಟಿಯ ರಾಮಲಿಂಗೇಶ್ವರ ಗುಡಿ ಉತ್ಸವ, ಹಿರೇಮಠದ ಗೌರಿಹುಣ್ಣಿಮೆ ಹಾಗೂ ದ್ಯಾಮವ್ವನ ಜಾತ್ರೆ, ಬಾಲಕ ರಾಚಯ್ಯನ ಮೇಲೆ ಪ್ರಭಾವ ಬೀರಿದ ಸಾಂಸ್ಕೃತಿಕ ಪರಿಸರಗಳಾಗಿವೆ.

**ಶಿಕ್ಷಣ :**

ರಾಚಯ್ಯನ ಶಿಕ್ಷಣ ಅಂಬಗಟ್ಟಿಯ ಗ್ರಾಮ ದೇವತೆಯ ಮಂದಿರದಲ್ಲಿ ನಡೆಯಿತು. ಅಂಬಗಟ್ಟಿಯ ಜನಪದ ಪರಿಸರ ತಮ್ಮ ಮೇಲೆ ಹೇಗೆ ಗಾಢವಾದ ಪ್ರಭಾವವನ್ನು ಬೀರಿತು ಎಂಬುದನ್ನು ಲೇಖನವೊಂದರಲ್ಲಿ ಹೀಗೆ ದಾಖಲಿಸಿದ್ದಾರೆ. “ಅಂಬಗಟ್ಟಿಯ ಬಳಿ ಕಾದರೊಳ್ಳಿ, ಕಾಡುವವ ಹಳ್ಳಿ, ಶಿವಶರಣರಿಗೂ ಬಿಜ್ಜಳನ ಅಳಿಯನಿಗೂ ಹೆಚ್ಚು ದಿನ ಕಾಳಗ ನಡೆದ ನೆಲೆ ಅಂಬಡಗಟ್ಟಿ, ಅಂಬಾಡಿ ಎಲೆ ಮಾರುವವರ ಕಟ್ಟಿ ಆಗಿದ್ದ. ಅಂಬಾಡಗಟ್ಟಿ ಎಂಬುದಾಗಿ ಬರಬರುತ್ತಾ ಅಂಬಡಗಟ್ಟಿಯೆಂದಾಯಿತೆಂದು ತಿಳಿದುಬರುತ್ತದೆ. ಈ ಅಂಬಡಗಟ್ಟಿಯಿಂದ ಮುಂದಿನ ಶಿಕ್ಷಣಕ್ಕೆ ಹೋಗುವ ಮುನ್ನ ಒಮ್ಮೆ ಶಾಲೆಯಲ್ಲಿ ಅನುತ್ತೀರ್ಣನಾಗಿ ತಂದೆಯವರ ಕೋಪಕ್ಕೆ ತುತ್ತಾಗಿ ಶಾಲೆಯ ಬಿಟ್ಟು ಕೆಲಕಾಲ ದನಕಾಯ್ದು, ಮುಂದೆ ೧೯೨೪ ರಲ್ಲಿ ಶಿವಯೋಗ ಮಂದಿರದಲ್ಲಿ ಸಂಸ್ಕೃತ ವ್ಯಾಸಂಗ ನಂತರ ಮುಂದಿನ ಬದುಕು ಅಂಬಡಗಟ್ಟಿಯ ಗ್ರಾಮದೇವತೆ ದ್ಯಾಮವ್ವೆಯ ಕಾರುಣ್ಯದಿಂದ ಓದು, ಸಂಶೋಧನೆ, ವಿವಿಧ ಪ್ರಕಾರದ ಸಾಹಿತ್ಯ ಸೃಷ್ಟಿಯಾಯಿತು. ಮುಖ್ಯವಾಗಿ ಇದಕ್ಕೆಲ್ಲ ಅಂಬಗಟ್ಟಿಯಲ್ಲಿನ ಬಾಲ್ಯ ಜೀವನ ಮತ್ತು ಪರಿಸರ ಪ್ರಭಾವಗಳೇ ಕಾರಣ” ಎಂದು ಹೇಳಿಕೊಂಡಿದ್ದಾರೆ.

**ಗುರುದೀಕ್ಷೆ :**

ರಾಚಯ್ಯನಿಗೆ ೧೨ರ ವಯಸ್ಸಾಗಿದ್ದಾಗ ಧಾರವಾಡ ಜಿಲ್ಲೆ ನವಲಗುಂದ ತಾಲ್ಲೂಕಿನ ಅಡ್ನೂರಿನ ಗ್ರಾಮದ ಮುಖ್ಯಸ್ಥರಾಗಿದ್ದ ಪ್ರಭುಗೌಡ ಪಾಟೀಲರ ಮನೆತನದ ಅಡ್ನೂರು ಮಠದ ಗುರುಗಳು ಅಡ್ನೂರು ಬಿಟ್ಟು ಅಂಬಡಗಟ್ಟಿಯಲ್ಲಿ ನೆಲೆ ಬಿಟ್ಟಿದ್ದರು. ಅಡ್ನೂರು ಮಠದ ಪಟ್ಟಾಧಿಕಾರಕ್ಕೆಂದು ಪ್ರಭುಗೌಡರ ಮಕ್ಕಳಾದ ಮಲ್ಲಿಕಾರ್ಜುನ ಗೌಡರು, ಅಂಬಡಗಟ್ಟಿಯಿಂದ ಸೂಕ್ತ ವ್ಯಕ್ತಿಯನ್ನು ಅಯ್ಕೆ ಮಾಡಲು ಬಂದರು. ಮಲ್ಲಿಕಾರ್ಜುನ ಗೌಡರ ಕೋರಿಕೆಯ ಮೇರೆಗೆ ದುಂಡಯ್ಯನವರು ತಮ್ಮ ಮಗನನ್ನು ಬಿಟ್ಟುಕೊಡಲು ಮುಂದೆ ಬಂದರು. ವಿಧಿಯ ಲಿಖಿತವನ್ನು ಬಲ್ಲವರಾರು ! ತಂದೆಯವರ ಆಶೀರ್ವಾದವನ್ನು ಹೊತ್ತು ಅಡ್ನೂರಿಗೆ ಮಠದ ಮರಿಯಾಗಿ ೧೪ನೇ ವಯಸ್ಸಿನಲ್ಲಿ ಅಂದರೆ ೧೯೨೩ ರ ಮಾರ್ಚ್ ತಿಂಗಳಲ್ಲಿ ಚಿಕ್ಕಪ್ಪ ಗುರು ಬಸವಯ್ಯನೊಡನೆ ರಾಚಯ್ಯ ಬಂದು ನಾಲ್ಕನೇ ತರಗತಿಗೆ ಸೇರಿದ. ನಾಲ್ಕನೇ ತರಗತಿಯಲ್ಲಿ ತೇರ್ಗಡೆಯಾದ ಮೇಲೆ ೧೫ನೇ ವಯಸ್ಸಿನಲ್ಲಿ ಹಾನಗಲ್ ಕುಮಾರಸ್ವಾಮಿಯವರ ಕೃಪಾಶೀರ್ವಾದದಿಂದ ಶಿವಯೋಗ ಮಂದಿರದಲ್ಲಿ ಸಂಸ್ಕೃತ ಅಧ್ಯಯನ ಪ್ರಾರಂಭಿಸಿದರು. ಅಲ್ಲಿ ಗುರು ದೀಕ್ಷೆ ಪಡೆದ ರಾಚಯ್ಯ 'ಚಂದ್ರಶೇಖರ ದೇವರು' ಎಂಬ ನಾಮಾಂಕಿತವನ್ನು ಪಡೆದರು. ಆ ವೇಳೆಗಾಗಲೇ ನಿರಂತರ ಅಧ್ಯಯನದಿಂದ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡಿದ್ದರಿಂದ, ತಮ್ಮ ಮನಸ್ಸಿನ ಭಾವನೆಗಳನ್ನು ಅಕ್ಷರ ರೂಪದಲ್ಲಿ ಸೆರೆ ಹಿಡಿಯಲು ಪ್ರಾರಂಭಿಸಿದರು. ತಮ್ಮ ೧೬ನೇ ವಯಸ್ಸಿನಲ್ಲಿ ಕವನ, ಲೇಖನಗಳನ್ನು ಬರೆಯುವುದರ ಮೂಲಕ ಶಿವಯೋಗ ಮಂದಿರದ ಸಹಪಾಠಿಗಳ ಗಮನ ಸೆಳೆದರು. ಅವರಲ್ಲಿ ಸುಪ್ತವಾಗಿದ್ದ ಪ್ರತಿಭೆ ಅನಾವರಣಗೊಳ್ಳಲು ಶಿವಯೋಗ ಮಂದಿರ ಸಾಧನಾ ಕ್ಷೇತ್ರವಾಯಿತು.

ಒಮ್ಮೆ ಷಡಕ್ಷರ ದೇವರ 'ವೃಷಭೇಂದ್ರ ವಿಜಯ' ಕಾವ್ಯವನ್ನು ಓದುವುದರಲ್ಲಿ ತನ್ಮಯರಾಗಿದ್ದ ಚಂದ್ರಶೇಖರ ದೇವರನ್ನು ಕಂಡ ಸಂಸ್ಕೃತ ಪಾಠ ಮಾಡುವ ಶಾಸ್ತ್ರಿಗಳ ಕಣ್ಣಿಗೆ ಬಿದ್ದು 'ಹೆಂಗಸರೋದುವ ಈ ಕನ್ನಡದಲ್ಲಿ ಏನಿದೆ ?' ಎಂದು ಮನಸ್ಸು ಘಾತವಾಗುವಂತೆ ಹೀಯಾಳಿಸಿದರು. ಇದರಿಂದ ಅವರ ಮನಸ್ಸಿಗೆ ನೋವಾದರೂ ಕನ್ನಡದಲ್ಲಿಯೇ ಸಾಧನೆ ಮಾಡಿ ತೋರಿಸಬೇಕೆನ್ನುವ ಛಲ ಹೆಚ್ಚಿತು. ನಿರಂತರವಾಗಿ ಕನ್ನಡ ಕಾವ್ಯಗಳ ತಲಸ್ಪರ್ಶಿ ಅಧ್ಯಯನ ಮಾಡಿ ಕನ್ನಡದಲ್ಲಿ ಉತ್ತಮ ಕೃತಿಗಳನ್ನು ರಚಿಸಲು ದೃಢಸಂಕಲ್ಪ ಮಾಡಿದರು, ಗುರಿ ನಿರ್ಧಾರ ಯಶಸ್ಸಿನ ಮೊದಲ ಹೆಜ್ಜೆಯಾದರೆ, ಆ ನಿಟ್ಟಿನಲ್ಲಿ ಮಾಡುವ ಪ್ರಯತ್ನ ಎರಡನೆ ಹೆಜ್ಜೆ ಎಂಬುದನ್ನು ಅರ್ಥಮಾಡಿಕೊಂಡು ಮುನ್ನಡೆದರು. ಕನಸು ಕಾಣುವ ಕಣ್ಣಿಗೆ, ಅದಕ್ಕಾಗಿ ದುಡಿಯುವ ಮನಸ್ಸಿಗೆ ಬದುಕು ಎಂದೂ ಬೇಸರ ತರಿಸದು. ಉತ್ತಮ ಚಿಂತನೆ ಅಭಿರುಚಿ ಬದುಕಿನ ಹಾದಿಯನ್ನು ಸುಲಭವಾಗಿಸುತ್ತದೆ ಎಂಬುದನ್ನು ಅನುಭವದಿಂದ ಕಂಡುಕೊಂಡರು. ಸಾಹಿತ್ಯ ಬಗ್ಗೆ ಆಸಕ್ತಿ ಇದ್ದುದರಿಂದ ೧೯೩೩ರ ಯುಗಾದಿ ಹಬ್ಬದಂದು ಕೈಬರಹದ 'ಸುಕುಮಾರ' ಮಾಸ ಪತ್ರಿಕೆಯನ್ನು ಪ್ರಕಟಿಸುವುದರ ಮೂಲಕ ತಾವೊಬ್ಬರು ಸೃಜನಶೀಲ ಬರಹಗಾರರೆಂದು ಸಾಬೀತುಗೊಳಿಸಿದರು. ನಾಡಿನ ವಿವಿಧ ಭಾಗಗಳಿಂದ 'ಸುಕುಮಾರ' ಮಾಸಿಕದ ಬಗ್ಗೆ ಪ್ರಶಂಸೆಗಳ ಮಹಾಪೂರವೇ ಹರಿದುಬಂದಿತು.





ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸೆಪ್ಟೆಂಬರ್ ೧೦, ೧೯೩೩ ರಂದು ಶಿವಯೋಗ ಮಂದಿರಕ್ಕೆ ಭೇಟಿ ನೀಡಿದ ಶುಭ ಸಂದರ್ಭದಲ್ಲಿ 'ಸುಕುಮಾರ' ಕೈ ಬರಹದ ಮಾಸಿಕವನ್ನು ನೋಡಿ ಸಂತೋಷಪಟ್ಟು ಮಾಸಿಕದ ಬಗ್ಗೆ ಹೀಗೆ ಬರೆದಿದ್ದಾರೆ. “ಶಿವಯೋಗ ಮಂದಿರದ ಸಾಧಕರಿಂದ ಹೊರಡಿಸಲ್ಪಡುವ ಈ ಪತ್ರಿಕೆಯಲ್ಲಿ ಅವಗಾಹನೆಯು ಸಂಪೂರ್ಣ ಆಯಿತು. ಇದರಲ್ಲಿ ಇರುವ ಸಾಮಾಜಿಕ, ನೀತಿ ಬೋಧಕ ಹಾಗೂ ತಾತ್ವಿಕ ಲೇಖನಗಳು ಸಾಧಕರ ಅನುಪಮ ಶ್ರದ್ಧಾ, ಭಾಷಾ ಸೌಷ್ಠವ, ಕನ್ನಡ ಪ್ರೇಮ ಮತ್ತು ವಿದ್ಯಾ ನಿಪುಣತೆ ಇವುಗಳನ್ನು ಉತ್ಕಟವಾಗಿ ಸ್ಪಷ್ಟೀಕರಿಸುತ್ತದೆ. ಇದರಲ್ಲಿ ಬರೆದಿರುವ ಚಿತ್ರಗಳು ಮುದ್ದಾಗಿಯೂ ಮನೋರಂಜಕವಾಗಿಯೂ ಇವೆ. ಸಣ್ಣ ಸಣ್ಣ ಕವನಗಳು ಹೃದಯಂಗಮವಾಗಿಯೂ ಮಹಾಮಂದಿರದ ಸನ್ನಿವೇಶದ ಮಹತ್ವವನ್ನು, ಪ್ರಕೃತಿ ಸೌಂದರ್ಯವನ್ನು ವರ್ಣಿಸ ತಕ್ಕವಾಗಿವೆ. ಈ ಸಂಚಿಕೆಯು ಶುಕ್ಲ ಪಕ್ಷದ ಚಂದ್ರನಂತೆ ವೃದ್ಧಿ ಹೊಂದುತ್ತ ಪ್ರಚಾರ ಹೊಂದಿ ಸಾಮಾಜಿಕ ಏಳ್ಗೆಯನ್ನು ಕೋರತಕ್ಕ ಮುಖ್ಯವಾದ ಪತ್ರಗಳಲ್ಲೊಂದಾಗಿ ಪರಿಣಮಿಸಲೆಂದು ಹಾರೈಸುವೆ” (ದಾಸೋಹಸಿರಿ, ಪುಟ ೪೨೯) ಎಂದು ಪ್ರಶಂಸನಾ ಶಿವನುಡಿಗಳನ್ನು ಬರೆದಿರುವುದು ಈ ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿದೆ.

ಹನ್ನೆರಡು ವರ್ಷಗಳ ಕಾಲ ಶಿವಯೋಗ ಮಂದಿರದಲ್ಲಿ ಶ್ರೀ ಚಂದ್ರಶೇಖರ ದೇವರು ಸಂಸ್ಕೃತ ಅಧ್ಯಯನ ನಡೆಸಿದರು. ಆಗ ಅವರಿಗೆ ಕನ್ನಡ ಬಗೆಗಿನ ಆಸಕ್ತಿ ಹೆಚ್ಚಾಗ ತೊಡಗಿತು. ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳಲು ನಿರಂತರ ಅಧ್ಯಯನದಲ್ಲಿ ತೊಡಗಿಸಿಕೊಂಡರು. ೧೯೩೬ರ ಕೊನೆಯಲ್ಲಿ ಶಿವಯೋಗ ಮಂದಿರ ಬಿಟ್ಟು ನವಿಲುಗುಂಡದ ಗವಿಮಠಾಧ್ಯಕ್ಷರಾದ ಶ್ರೀ ಬಸವಲಿಂಗ ಸ್ವಾಮಿಗಳವರ ಪರಿಚಯ ಪತ್ರದೊಂದಿಗೆ ಬೆಂಗಳೂರಿಗೆ ಬಂದರು. ಅಲ್ಲಿ ಸರ್ಪಭೂಷಣ ಮಠದ ಶ್ರೀ ಮಹಾದೇವ ಸ್ವಾಮಿಗಳವರಲ್ಲಿ ಆಶ್ರಯ ಪಡೆದರು. ಅಲ್ಲಿ ಕಳೆದ ಎರಡು ವರ್ಷದ ಅವಧಿಯಲ್ಲಿ ತಮ್ಮ ಅಧ್ಯಯನದಿಂದ ಪಡೆದುಕೊಂಡ ವಿದ್ವತನ್ನು ಪತ್ರಿಕೆಗಳಿಗೆ ಲೇಖನ, ಕವನ ಬರೆಯುವುದಕ್ಕೆ ಬಳಸಿಕೊಂಡರು. ತಾಳೆಗರಿಗಳನ್ನು ಪರಿಶೋಧಿಸುವುದು, ಮುಪ್ಪಿನ ಷಡಕ್ಷರಿಯ ಕೈವಲ್ಯದ ಹಾಡುಗಳ ಪರಿಷ್ಕರಣ ಹಾಗೂ ಈ ಹಾಡುಗಳ ಆಶಯದ ವಚನಗಳ ಜೋಡಣೆ ಮಾಡಿ ಶುದ್ಧ ಪ್ರತಿ ತಯಾರಿಕೆ, ಇತ್ಯಾದಿ ಕೈಂಕರ್ಯದಲ್ಲಿ ತೊಡಗಿಸಿಕೊಂಡರು. ಮಹಾದೇವಿಯಕ್ಕಗಳ ತ್ರಿವಿಧ ಕಾವ್ಯವನ್ನು ಮೊಟ್ಟ ಮೊದಲಿಗೆ ಪರಿಷ್ಕರಿಸಿ 'ಮಹಾದೇವಿಯಕ್ಕಗಳ ಯೋಗಾಂಗ ತ್ರಿವಿಧಿ' ಎಂಬ ಹೆಸರಿನಲ್ಲಿ ಲೋಕಾರ್ಪಣೆ ಮಾಡಿದರು. 'ಅಕ್ಕನ ಬಳಗ'ವನ್ನು ಸ್ಥಾಪಿಸಿ ಮೌಲಿಕವಾದ ಉಪನ್ಯಾಸ ನೀಡಿ, 'ಅಕ್ಕನ ಅಮೃತವಾಣಿ', 'ಅಕ್ಕನ ಲಾವಣಿ', 'ಅಕ್ಕನ ಬಾಳು' ಇತ್ಯಾದಿ ಮಹತ್ವದ ಕೃತಿಗಳನ್ನು ಹೊರತಂದರು.

**ಪೀಠಾಧಿಕಾರ :**

ಸುಮಾರು ಒಂದು ಸಾವಿರ ವರ್ಷದ ಇತಿಹಾಸವಿರುವ ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿನ ಗೂಳೂರು ಗ್ರಾಮದಲ್ಲಿರುವ ಶ್ರೀಶೈಲ ನಿಡುಮಾಮಿಡಿ ಮಹಾಸಂಸ್ಥಾನ ಪೀಠಾಧ್ಯಕ್ಷರಾಗಿದ್ದ ಶ್ರೀ ಕರಿಸಬವೇಂದ್ರ ಜಗದ್ಗುರುಗಳು ಲಿಂಗೈಕ್ಯರಾಗಿ ತುಂಬಾ ದಿನಗಳಾಗಿದ್ದರೂ ಅಲ್ಲಿಗೆ ಯಾರನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿರಲಿಲ್ಲ. ಶ್ರೀ ಪೀಠದ ಭಕ್ತರು ಅಭಿಮಾನಿಗಳು ಆಶಯದಂತೆ 'ಶ್ರೀ ಚಂದ್ರಶೇಖರ ದೇವರ'ನ್ನು ಆಯ್ಕೆ ಮಾಡಿದರು. ಜೂನ್ ೧೨, ೧೯೪೯ ರಂದು ಪೀಠಾಧಿಕಾರ ಸಮಾರಂಭ, ವಿವಿಧ ಮಠಗಳ ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ವಿಜೃಂಭಣೆಯಿಂದ ನಡೆಯಿತು. ಅವರಿಗೆ ಪೀಠದ ಪರಂಪರೆಗನುಗುಣವಾಗಿ “ಶ್ರೀ ಗಿರಿರಾಜ ಮಣಿಖಚಿತ ಕನಕಸಿಂಹಾಸನಾಧೀಶ್ವರ ಜ॥ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು” ಎಂಬ ಹೆಸರಿನಲ್ಲಿ ಶ್ರೀಶೈಲ ನಿಡುಮಾಮಿಡಿ ಪೀಠದ ಗೂಳೂರು ಮಹಾಸಂಸ್ಥಾನದಲ್ಲಿ ೪ನೆಯ ಪೀಠಾಧ್ಯಕ್ಷರೆನಿಸಿದರು. ಈ ದೀರ್ಘ ಹೆಸರನ್ನು ಸಾಹಿತ್ಯಕ ಅಭಿವ್ಯಕ್ತಿಗಳಿಗೆಂದು 'ಶ್ರೀ ಜಚನಿ' ಎಂಬ ಕಾವ್ಯನಾಮವಾಗಿ ಬಳಸಿದರು.

ಅವರು ಪೀಠಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಾಗ ಪೀಠದ ಆರ್ಥಿಕ ಸ್ಥಿತಿ ದುರ್ದಶೆಯಿಂದ ಕೂಡಿತ್ತು. ಕಟ್ಟಡಗಳು ಶಿಥಿಲಗೊಂಡಿದ್ದವು. ಆ ಕಟ್ಟಡದಲ್ಲಿ ಶಿಷ್ಯರು ವಾಸ ಮಾಡಲು ಹೆದರುತ್ತಿದ್ದರು. ದಿನನಿತ್ಯದ ಅಗತ್ಯತೆಗಳನ್ನು ಪೂರೈಸಲು ಆಗದಂತ ದುಸ್ಥಿತಿ. ಪ್ರಸಾದಕ್ಕೆ ಇದ್ದುದು ಕೇವಲ ನೆನೆಹಾಕಿದ ಕಡಲೆ ಕಾಳು. ಆರಂಭದ ದಿನಗಳು ತುಂಬಾ ಕಷ್ಟಕರವಾಗಿದ್ದವು, ಎಲ್ಲವನ್ನೂ ಸಹಿಸಿಕೊಂಡು ಪೀಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹಂತ ಹಂತವಾಗಿ ಸಾಕಾರಗೊಳಿಸುತ್ತಾ ಬಂದರು.

ಇಂಥಹ ಕಷ್ಟದ ಪರಿಸ್ಥಿತಿಯಲ್ಲಿಯೂ ಸಾಹಿತ್ಯ ಕೃಷಿ ನಿರಂತರವಾಗಿ ನಡೆಯುತ್ತಿತ್ತು. ಇದರ ಜೊತೆಗೆ ಧಾರ್ಮಿಕ, ಸಾಂಸ್ಕೃತಿಕ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಅಕ್ಕನ ಬಳಗ, ಭ್ರಮರಾಂಭ ಬಳಗ, ಮಲ್ಲಿಕಾಂಭ ಮಂಡಳಿ, ಶಿವಾಚಾರಿಣಿಯರ ಸಮಾಜ ಹೀಗೆ ಮಹಿಳಾ ಸಂಘಗಳನ್ನು ಸ್ಥಾಪಿಸಿ ಮಹಿಳೆಯರು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಮಾರ್ಗದರ್ಶನ ನೀಡಿದರು.

**ವಚನ ಸಾಹಿತ್ಯ :**

ಪೂಜ್ಯ ಶ್ರೀ ಜ.ಚ.ನಿ. ಸನ್ನಿಧಿಯವರ ಮೇಲೆ ಬಸವಾದಿ ಶರಣರ ಪ್ರಭಾವ ನಿಚ್ಚಲವಾಗಿತ್ತು. ಅದರಲ್ಲಿಯೂ ವಿಶೇಷವಾಗಿ ಮಹದೇವಿಯಕ್ಕ ಹಾಗೂ ಉರಿಲಿಂಗ ಪೆದ್ದಿಗಳ ವಚನಗಳು ಸ್ಫೂರ್ತಿಯಾಗಿತ್ತು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಎಂಟು ಸಾವಿರ ವಚನಗಳನ್ನು ರಚಿಸಿ ದಾಖಲೆಯನ್ನು

ನಿರ್ಮಿಸಿದವರು ಶ್ರೀ ಜ.ಚ.ನಿ.ಯವರು. ಅವರ ಒಂದೊಂದು ವಚನಗಳು ಆಪ್ಯಾಯಮಾನವಾಗಿವೆ. ೧೯೪೯ ರಲ್ಲಿ ಪ್ರಕಟವಾದ ಮೊದಲ ವಚನ ಸಂಕಲನ 'ವಚನಾಂಜಲಿ.' ನಂತರ ವಚನವಲ್ಲರಿ ಭಾಗ-೧ ಮತ್ತು ಭಾಗ-೨, ಮಣಿ ವಚನಗಳು, ಯುಗವಚನ, ಸೊಗವಚನ, ಮಿಡಿವಚನ, ದುಡಿವಚನ, ಸದಾಶಿವಸೊಲ್ನುಡಿ, ವಚನ ವಿಭಾವ, ವಿಶ್ವಶಿವಾತ್ಮಭಾವದ ಗೌರಘನತೆ, ಶ್ರೀ ರುದ್ರಸೂಳ್ನುಡಿಗಳು. ಮೊದಲಾದ ವಚನ ಸಂಗ್ರಹಗಳು ಲೋಕಾರ್ಪಣೆಯಾಗಿವೆ. ಇವುಗಳ ಜೊತೆಗೆ ೧೨ನೆಯ ಶತಮಾನದ ಪೂರ್ವ ವೀರಶೈವ ಸೂಳ್ನುಡಿಕಾರರು ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ.

ಪೂಜ್ಯರು ಮಹಾಕಾವ್ಯ, ಖಂಡಕಾವ್ಯ, ವಾರ್ಧಕ ಷಟ್ಪದಿ ಗ್ರಂಥಗಳನ್ನು ರಚಿಸಿದ್ದಾರೆ. ಚಂದ್ರಪ್ರಭಾ, ಸದಾಶಿವ ರುದ್ರಂ, ಸಜ್ಜಲ ಶರಣವ್ವೆ, ಚಂದ್ರಾವತಿ, ಮಣಿಮುಕುಟಂ, ಪರ್ವತ ಪೀಠ ಪ್ರಭಾವಂ. ಒಟ್ಟಾರೆ ಪೂಜ್ಯ ಶ್ರೀಗಳವರ ಕಾವ್ಯ ಸರಳ ರಗಳೆ ಷಟ್ಪದಿಗಳಲ್ಲಿ ರಚನೆಗೊಂಡು ಕನ್ನಡ ಸಾಹಿತ್ಯ ಲೋಕಕ್ಕೆ ಆಧ್ಯಾತ್ಮಿಕ ಕವಿಯ ಶಾಸ್ತ್ರ, ಕಾವ್ಯ, ಸಿದ್ಧಾಂತಗಳ ದರ್ಶನವನ್ನು ನೀಡಿವೆ ಎಂಬ ವಿದ್ವಾಂಸರಾದ ಡಾ. ಎಂ.ಜಿ. ನಾಗರಾಜ್ ಅವರ ಮಾತುಗಳು ಅರ್ಥ ಪೂರ್ಣವಾಗಿವೆ.

ಮಾಮಿಡಿ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸುವುದರ ಮೂಲಕ ಹಲವಾರು ವಿಷಯಗಳನ್ನು ಕುರಿತ ಲೇಖನಗಳನ್ನು ಪ್ರಕಟಿಸಿ ಓದುಗರ ಅರಿವಿನ ದಿಗಂತವನ್ನು ವಿಸ್ತಾರ ಮಾಡಿಕೊಳ್ಳಲು ನೆರವಾಗಿದ್ದಾರೆ.

**ಕವನ ಸಂಕಲನಗಳು :**

ಪೂಜ್ಯ ಶ್ರೀ ಜ.ಚ.ನಿ. ಯವರು ೧೮ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಒಂದು ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿ ಕವನಗಳು ಇವೆ. ಹೊನ್ನುಹಕ್ಕಿ, ರನ್ನಚುಕ್ಕಿ, ಹೂಗೊನೆ, ಹೂಬೊಗಸೆ, ಹಾಲ್ಕೆನೆ, ಗುರು ಗೀತಾಂಜಲಿ, ಭಾವಗೀತಾಂಜಲಿ, ಆರಾಧನಾ, ಚಾಲನೆ, ಕಾವ್ಯವಾಣಿ, ಉದಯ, ಕವನ ಕೇತನವು ಸಂಕಲನಗಳು ಶ್ರೀಗಳವರ ಕಾವ್ಯ ಪ್ರತಿಭೆಯಿಂದ ಮೂಡಿಬಂದವುಗಳು.

**ಸೈದ್ಧಾಂತಿಕ ಕೃತಿಗಳು :**

ಪೂಜ್ಯ ಶ್ರೀಗಳವರು ಬರೆದ ಕೃತಿಗಳನ್ನು ಅವಲೋಕನ ಮಾಡುವಾಗ ಅಚ್ಚರಿಯಾಗುತ್ತದೆ. ಇಷ್ಟೆಲ್ಲ ವಿದ್ವತಪೂರ್ಣವಾದ ಗ್ರಂಥಗಳನ್ನು ಹೇಗೆ ಬರೆದರು ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಅವರದು ಭೀಮ ಪ್ರತಿಭೆ 'ಜೀವನ ಸಿದ್ಧಾಂತ' ಕೃತಿಯ ಒಂದು ಷಟ್‌ಸ್ಥಲ ಸಂಪುಟಗಳ ಮಾಲಿಕೆ. ಆರು ಸಂಪುಟಗಳಲ್ಲಿ ಐದು ಸಾವಿರ ಪುಟಗಳು ಮೀರಿದ ಹೊತ್ತಿಗೆಗಳಾಗಿ ನಾಲ್ಕು ವರ್ಷಗಳ ಅವಧಿಯಲ್ಲಿ ಪ್ರಕಟವಾದದು. ಇದು ಜೀವನ ದರ್ಶನವನ್ನು ಮಂಡಿಸಿರುವ ಶ್ರೀಗಳವರ ಮೇರು ಕೃತಿಯಾಗಿದೆ. ದಾರ್ಶನಿಕ ಕೃತಿಯಾಗಿದೆ. ಸಿದ್ಧಾಂತ ಶಿಖಾಮಣಿಗೆ ಒಂದು ಹೊಸ ಭಾಷ್ಯವಾಗಿ 'ಜೀವನ ಸಿದ್ಧಾಂತ'ವನ್ನು ಬರೆದಂತೆ ಕಾಣುತ್ತದೆ.

'ಸಂಪಾದನೆಯ ಸೊಂಪು', 'ಶೂನ್ಯ ಸಂಪಾದನೆ'ಯ ಸಮಗ್ರ ವಿವೇಚನೆಯನ್ನು ನಾಲ್ಕು ಎಸಳುಗಳಲ್ಲಿ ಬಂದ ಏಳು ಸಂಪುಟಗಳಲ್ಲಿ ಹೊರತಂದ ಮೇರುಕೃತಿ ಆಗಿದೆ. 'ಅನುಭವ ಅನುಗ್ರಹ', 'ಆಚಾರ ಅರ್ಚನ', 'ಕಾಯಕ', 'ಆರೋಹಣ', ಆರೋಗಣ ಈ ಕ್ರಮದಲ್ಲಿ ಪ್ರತಿಪಾಲನೆ ಇದೆ. ಕೈವಲ್ಯ ಪದ್ಧತಿ ಪ್ರದೀಪಿಕೆ, ನಿಜಗುಣ ಶಿವಯೋಗಿಗಳ ಆರು ಆಧ್ಯಾತ್ಮಿಕ ಧಾರ್ಮಿಕ ಕೃತಿಗಳ ಪೈಕಿ 'ಕೈವಲ್ಯ ಪದ್ಧತಿ' ಒಂದಾಗಿದೆ.

**ಡಿ.ಲಿಟ್ ಗೌರವ :**

ಪೂಜ್ಯ ಶ್ರೀ ಜಚನಿ ಅವರು ಬರೆದ 'ಜೀವನ ಸಿದ್ಧಾಂತ' ಕೃತಿಗೆ ೧೯೭೨ ರಲ್ಲಿ ಮೈಸೂರು ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ಪದವಿಯನ್ನು ನೀಡಿ ಗೌರವಿಸುವುದರ ಮೂಲಕ ತನ್ನ ಘನತೆ ಗೌರವವನ್ನು ಹೆಚ್ಚಿಸಿಕೊಂಡಿದೆ. ಅಲ್ಲದೆ ಅವರ ಅನೇಕ ಗ್ರಂಥಗಳಿಗೆ ಅಕಾಡೆಮಿ ಪ್ರಶಸ್ತಿಗಳೂ ದೊರಕಿವೆ.

**ಶ್ರೀ ಸಿದ್ಧಗಂಗಾ ಮಠದೊಂದಿಗೆ :**

ಪೂಜ್ಯ ಜಚನಿ ಅವರು ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದರು. ಪರಸ್ಪರ ಗೌರವವನ್ನು ಹೊಂದಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಕಾರ್ಯಕ್ರಮಗಳಲ್ಲಿ ಭಾಗಿಯಾಗಿದ್ದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

**ಸಾಮಾಜಿಕ ಕ್ಷೇತ್ರ :**

ಪೂಜ್ಯ ಶ್ರೀಗಳು ಆಧ್ಯಾತ್ಮಿಕ ಸಾಂಸ್ಕೃತಿಕ ಸಾಹಿತ್ಯಿಕ ಕ್ಷೇತ್ರಗಳ ಜೊತೆಗೆ ಸಾಮಾಜಿಕ ಕ್ಷೇತ್ರದಲ್ಲಿಯೂ ತೊಡಗಿಸಿಕೊಂಡಿದ್ದರು. ಶಿಕ್ಷಣದ ಕಡೆಗೆ ಹೆಚ್ಚು ಒತ್ತುಕೊಟ್ಟರು. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಅವಕಾಶವಿಲ್ಲದೆ ಶಿಕ್ಷಣದಿಂದ ವಂಚಿತರಾಗಬಾರದೆಂಬ ದೂರದೃಷ್ಟಿಯಿಂದ ಬೂದಿಲಿ ಉನ್ನತ ಪಾಠಶಾಲೆಗೆ (ಆಂಧ್ರ) ನಿಧಿ ನೆರವು ನೀಡಿದ್ದು ೧೯೭೦ರಲ್ಲಿ ನಿರ್ಮಾಣವಾಗಿದೆ. ಅವರ ಮಾರ್ಗದರ್ಶನದ ಮುಂಬೆಳಕಿನಲ್ಲಿ ಅವರ ಉತ್ತರಾಧಿಕಾರಿಗಳಾದ ಶ್ರೀ ವೀರಭದ್ರ ಚನ್ನಮಲ್ಲ ಮಹಾಸ್ವಾಮಿಗಳು 'ಡಾ. ಶ್ರೀ ಜಚನಿ ರಾಷ್ಟ್ರೀಯ ವಿದ್ಯಾಪೀಠ' ಎಂಬ ಹೆಸರಿನಡಿಯಲ್ಲಿ ಧರ್ಮಗುರು ಗ್ರಂಥಾಲಯ, ಪಂಡಿತಾರಾಧ್ಯ ವಾಚನಾಲಯ, ಶಿಶುವಿಹಾರ, ಧರ್ಮಗುರು ವೃದ್ಧಾಶ್ರಮ, ಪ್ರೌಢಶಾಲೆ, ಪದವಿಪೂರ್ವ ಕಾಲೇಜು, ಪದವಿ ಕಾಲೇಜುಗಳನ್ನು ಪ್ರಾರಂಭಿಸಿದ್ದಾರೆ. ಡಾ. ಶ್ರೀ ಜಚನಿ ಅನಾಥ ಮಕ್ಕಳ ಉಚಿತ ವಿದ್ಯಾರ್ಥಿ ನಿಲಯ, ಡಾ. ಶ್ರೀ ಜಚನಿ ವಸತಿ ಸಹಿತ ಪ್ರೌಢಶಾಲೆ, ಶ್ರೀ ಜಚನಿ





ಬಾಲವಿಕಾಸ ಕೇಂದ್ರ, ಡಾ. ಶ್ರೀ ಜಚನಿ ಮಹಾವಿದ್ಯಾಲಯ, ವಿಶ್ವಗೃಹ ನೀರಿನ ಬೃಹತ್ ತೊಟ್ಟಿ, ಶ್ರೀ ನಿಡುಮಾಮಿಡಿ ನರ್ಸರಿ ಇತ್ಯಾದಿ ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿವೆ.

ಶ್ರೀ ನಿಡುಮಾಮಿಡಿ ಪೀಠದ ಪರಮಭಕ್ತರು, ಪೂಜ್ಯ ಶ್ರೀ ಜಚನಿ ಅವರ ಅಂತರಂಗದ ಸದ್ಭಕ್ತರೂ, ಶಿಷ್ಯರೂ, ನಾಡಿನ ಹಿರಿಯ ವಿದ್ವಾಂಸರೂ ಆದ ಡಾ. ಎಂ.ಜಿ. ನಾಗರಾಜ್ ಅವರು ಶ್ರೀ ಜಚನಿ ಅವರನ್ನು ಕುರಿತು ಹೀಗೆ ಹೇಳಿದ್ದಾರೆ "ಎಂಬತ್ತೇಳು ವಸಂತಗಳನ್ನು ಬಾಳಿನಲ್ಲಿ ಕಂಡು ಶಿವನಲ್ಲಿ ಕೂಡಲವಾದ ಡಾ. ಶ್ರೀ ಜಚನಿ ಆಧ್ಯಾತ್ಮದ ರಸಋಷಿ, ಕನ್ನಡ ಸಾಹಿತ್ಯ ಅರ್ಥಾತ್ ಸಾಹಿತ್ಯ ಲೋಕದ ತಾತ್ತ್ವಿಕ ಸಿರಿಯಚ್ಚರಿ. ಅವರ ಬರಹದ ಸಿರಿಯಲ್ಲಿ ಕಾವ್ಯ, ಮೀಮಾಂಸೆ, ದರ್ಶನ, ವಚನ, ಸೂಳ್ನುಡಿ, ಕವನ, ಸಂಶೋಧನೆ, ಇತಿಹಾಸ, ಜೀವನ ಚಿತ್ರ, ಜಾನಪದ, ಸಂವಾದ, ಸಾಹಿತ್ಯ, ಪ್ರವಾಸ ಸಾಹಿತ್ಯ, ವೀರಶೈವ ಸಾಹಿತ್ಯ, ವೀರಾಗಮ ವ್ಯಾಖ್ಯಾನ ಸಂಪಾದನೆ, ಕನ್ನಡ ನುಡಿ ನಿರ್ಮಾಣ, ಹೀಗೆ ಯಾವುದೆಲ್ಲವೂ ಸಾಧಿಸಿದ ತೃಪ್ತಿ ! ಸೃಜನೇತರ, ಸೃಜನಶೀಲ ಸಾಹಿತ್ಯದಲ್ಲಿ ಸವ್ಯಸಾಚಿಯ ನಡೆ, ಅನುಭಾವದ ಸೊಗಸು, ಈ ಎತ್ತರ, ಬಿತ್ತರಗಳಿಗೆ ಅವರೇ ಹೇಳಿರುವಂತೆ ಅಂಬಡಗಟ್ಟೆಯಲ್ಲಿನ ಬಾಲ್ಯ ಜೀವನ ಹಾಗೂ ಪರಿಸರ ಪ್ರಭಾವಗಳೇ ಕಾರಣ. ಅವರ ರೀತ್ಯಾ ಬಾಳಿನ ಬೆಳವಣಿಗೆಗೆ ದೇಶ-ಕಾಲ-ವಸ್ತುಗಳು ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. ಅಂದರೆ, ಪ್ರಭಾವ ಆ ಭಾವದ ಸದ್ಭೃತ್ತಿ, ಸದ್ವೃತ್ತಿಯಿಂದ ಸ್ವಭಾವ ಸಂಭಾವವಾಗುತ್ತದೆ. ಈ ಹಿನ್ನೆಲೆಯಲ್ಲಿ ಹದಿಹರಯದಲ್ಲಿ ಆರಂಭವಾದ ಅವರ ಸಾಹಿತ್ಯ ರಚನೆ, ಮುಂದೆ ೩೩೦ ಕೃತಿಗಳಲ್ಲಿ ಪ್ರಕಟಣೆಯಾಗಿ ಸಾರಸ್ವತ ಸೇವೆ ಧಾರ್ಮಿಕ ಅಂಗಳ ದಾಟಿ ಕನ್ನಡ ವಾಙ್ಮಯ ಲೋಕದಲ್ಲಿ ವಿಶಿಷ್ಟ ಸ್ಥಾನ ಪಡೆಯಿತು. ಅವರ ಆಧ್ಯಾತ್ಮದ ಅಂಗಳ ಸರಸ್ವತಿಯ ಮಡಿಲಾಗಿ ಕಂಗೊಳಿಸಿತು." ಈ ಮಾತುಗಳು ಶಿಷ್ಯ ಗುರುವಿನ ಬಗ್ಗೆ ವಿನಮ್ರತೆಯಿಂದ ಸಲ್ಲಿಸಿದ ನುಡಿನಮನಗಳಾಗಿವೆ. ಅವರ ಬದುಕಿನ ಒಟ್ಟಾರೆ ಚಿತ್ರಣವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದಂತೆ ಕಾಣುತ್ತದೆ.

ತಮ್ಮ ಇಡೀ ಬದುಕನ್ನು ಆಧ್ಯಾತ್ಮಿಕ, ಸಾಹಿತ್ಯಿಕ ಸೇವೆಗೆ ಮುಂದಾಗಿದ್ದು ೮೭ ವರ್ಷಗಳ ಬೇವು ಬೆಲ್ಲವನ್ನು ಸಾರ್ಥಕ ಜೀವನ ನಡೆಸಿ ನವೆಂಬರ್ ೫, ೧೯೯೬ ರಂದು ಲಿಂಗದೊಳಗಾದರು. ಅವರು ಭೌತಿಕವಾಗಿ ನಮ್ಮಿಂದ ಇಲ್ಲದೇ ಹೋದರೂ ಅವರು ಬಿಟ್ಟು ಹೋದ ಸಾಹಿತ್ಯ ಸಂಪತ್ತಿನ ಮೂಲಕ ಅಮರರಾಗಿದ್ದಾರೆ.

(ಆಧಾರ: ಡಾ. ಶ್ರೀ ಜಚನಿ ಮಹಾಸನ್ನಿಧಿ, ಲೇ. ಡಾ. ಎಂ.ಜಿ. ನಾಗರಾಜ್, ಶ್ರೀ ಸಿದ್ಧಗಂಗಾ ಪ್ರಕಾಶನ, ಶ್ರೀ ಸಿದ್ಧಗಂಗಾ ಮಠ).

## ಶ್ರದ್ಧಾಂಜಲಿ



### ಸಜ್ಜನ ರಾಜಕಾರಣಿ ಶ್ರೀ ಬಿ.ಬಿ. ಶಿವಪ್ಪ

ಕರ್ನಾಟಕದ ರಾಜಕೀಯ ಕ್ಷೇತ್ರದಲ್ಲಿ 'ಸಜ್ಜನಿಕೆ ರಾಜಕಾರಣಿ' ಎಂದೇ ಪ್ರಖ್ಯಾತರಾಗಿದ್ದ ಭಾರತೀಯ ಜನತಾ ಪಕ್ಷದ ಹಿರಿಯ ರಾಜಕೀಯ ಮುತ್ಸದ್ದಿ ಶ್ರೀ ಬಿ.ಬಿ. ಶಿವಪ್ಪನವರು ಜುಲೈ ೩ ರಂದು ಶಿವನೊಳಗಾದರು ಎಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ.

ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಬೆಳ್ಳೂರು ಗ್ರಾಮದ ಶ್ರೀಮಂತ ಕಾಫಿ ಬೆಳೆಗಾರರಾಗಿದ್ದ ಶರಣ ಬಿ.ಬಿ. ಬಸಪ್ಪ, ಶರಣೆ ಮುತ್ತಮ್ಮ ದಂಪತಿಗಳಿಗೆ ಪುತ್ರರಾಗಿ ಸೆಪ್ಟೆಂಬರ್ ೨೯, ೧೯೨೯ ರಲ್ಲಿ ಜನಿಸಿದರು. ಸೋಮವಾರ ಪೇಟೆಯ ಸರ್ಕಾರಿ ಶಾಲೆಯಲ್ಲಿ ಮೆಟ್ರಿಕ್ ಶಿಕ್ಷಣವನ್ನು ಮುಗಿಸಿದರು. ೧೯೩೪ರಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಳು ತೀವ್ರಗೊಂಡಿದ್ದ ಕಾಲದಲ್ಲಿ ಮಹಾತ್ಮ ಗಾಂಧೀಜಿಯವರು ಕೊಡಗಿನ ಪ್ರವಾಸ ಕೈಗೊಂಡಿದ್ದಾಗ ಶಿವಪ್ಪನವರ ಮನೆಗೆ ಭೇಟಿ ನೀಡಿದ್ದುದನ್ನು ಸದಾ ಸ್ಮರಿಸಿಕೊಳ್ಳುತ್ತಿದ್ದರು.

ಬಿಜೆಪಿ ರಾಷ್ಟ್ರೀಯ ನಾಯಕ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ಶ್ರೀ ಶಿವಪ್ಪನವರನ್ನು ಬಿಜೆಪಿ ಪಕ್ಷಕ್ಕೆ ಆಹ್ವಾನಿಸಿ ೧೯೮೩ ರಲ್ಲಿ ಪಕ್ಷದ ರಾಜ್ಯಾಧ್ಯಕ್ಷರನ್ನಾಗಿ ನೇಮಿಸಿದರು. ಸಕಲೇಶಪುರದ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾದರು. ವಿಧಾನ ಪರಿಷತ್ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ಹಾಸನದ ಮಲೆನಾಡು ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಸಂಸ್ಥೆಯನ್ನು ಸಾಧನಾ ಪಥದಲ್ಲಿ ಮುನ್ನಡೆಸಿದರು.

ಶ್ರೀಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ ಗೌರವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿದ್ದರು. ದಯಾಮಯನಾದ ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

# ಇಷ್ಟಲಿಂಗ ಯೋಗ ತಪಸ್ವಿ ಪರಮಪೂಜ್ಯ ಸಿದ್ಧಗಂಗಾ ಶ್ರೀಗಳು

– ಯೋಗೀಶ್ ನಿರ್ವಿಕಲ್ಪ *

ಅವಿಶ್ರಾಂತ ಜಂಗಮ ಕಾರ್ಯದಲ್ಲಿಯೇ ಪರಮಾತ್ಮನನ್ನು ಕಂಡು ಆರಾಧಿಸುತ್ತಿರುವ ದೇಶ ಕಂಡ ಶ್ರೇಷ್ಠ ಸನ್ಯಾಸಿ ಶರಣ ಪರಂಪರೆಯ ಸಿದ್ಧಗಂಗಾ ಮಠದ ಪರಮ ಪೂಜ್ಯ ಶ್ರೀಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು. ಶಿಕ್ಷಣದ ಮೂಲಕ ದೇಶದ ಭವಿಷ್ಯವನ್ನು ಆದರ್ಶಮಯವಾಗಿ ಚಿತ್ರಿಸುವ ಹಾದಿಯಲ್ಲಿ ನಡೆದುಕೊಂಡು ಬರುತ್ತಿರುವ ಅವರು ಶಿಕ್ಷಣ ದಾಸೋಹ ಪರ್ವದ ಮೂಲಕ ದೇಶಕ್ಕೆ ದಿಕ್ಸೂಚಿಯಾಗಿದ್ದಾರೆ. ಒಬ್ಬ ಆದರ್ಶ ಗುರುವಿನ ಕರ್ತವ್ಯ ಏನೆಂಬುದಕ್ಕೆ ಸಾಕ್ಷಿ ಪ್ರಜ್ಞೆಯಂತಿರುವ ಅವರು ಸನ್ಯಾಸ ತತ್ತ್ವಕ್ಕೆ ವೈಚಾರಿಕ ಭಾಷ್ಯ ಬರೆದ ಕೀರ್ತಿ ಅವರದು. ಗುರು ಬಸವಣ್ಣನವರಲ್ಲಿ ಭಕ್ತಿ, ಪರಮಾತ್ಮ ತತ್ತ್ವದಲ್ಲಿ ಅಚಲವಾದ ಶ್ರದ್ಧೆ ಮತ್ತು ಮನಸ್ಸಿನಲ್ಲಿ ನಿಸ್ವಾರ್ಥತೆಯ ಭಾವನೆಯಿದ್ದರೆ ಜಗತ್ತಿನಲ್ಲಿ ಅಸಾಧ್ಯವಾದದ್ದನ್ನು ಸಾಧಿಸಬಹುದು ಎಂಬುದನ್ನು ಸಾಧಿಸಿ ತೋರಿಸಿರುವ ಅವರು ಯುಗದ ಉತ್ಸಾಹದ ಚೇತನ ಎನ್ನುವುದರಲ್ಲಿ ಎರಡು ಮಾತಿಲ್ಲ.

**ಯೋಗ ತಪಸ್ವಿ :**

**ಅರಿಯಲಿಲ್ಲದ ಅರಿವು ಅವಗ್ರಹಿಸಿತ್ತಾಗಿ**
**ಅರಿಯಲಿಲ್ಲದ ಮರೆಯಲಿಲ್ಲದ ನಿಜವು ನಿಂದಿತ್ತಾಗಿ**
**ನಿರ್ನಾಮವಾಯಿತು, ನಿಃಷ್ಪತ್ತಿಯಾಯಿತು**
**ಅಗಮ್ಯದಲ್ಲಿ ಗಮನಕೆಟ್ಟಿತು, ನಿಂದಲ್ಲಿ ನಿರಾಳವಾಯಿತು**
**ಕೂಡಲ ಸಂಗಮ ದೇವರಲ್ಲಿ (ನಿರಾಕಾರ ತತ್ತ್ವ)**
**ಶಬ್ಧಮುಗ್ಧವಾಯಿತ್ತು.**

'ಯಾವುದನ್ನು ಜೀವನದಲ್ಲಿ ಅರ್ಥೈಸಿಕೊಳ್ಳಬೇಕಾದದು ಇದೆಯೋ ? ಯಾವುದನ್ನು ತಿಳಿಯುವುದರಿಂದ ಜೀವನ ಪರಮ ಪಾವನಗೊಳ್ಳುತ್ತದೆಯೋ ? ಅಂತಹ ಪರಮ ಶ್ರೇಷ್ಠವಾದ ಅರಿವು ಅರಿಯುವುದು ಸುಲಭ ಸಾಧ್ಯವಲ್ಲ ! ಅಂತಹ ಅರಿವನ್ನು ತನ್ನೊಳಗೆ ಕಂಡುಕೊಂಡೆ ! ಯಾವುದನ್ನು ತಿಳಿಯಲು ಸಾಧ್ಯವೋ ಹಾಗೂ ಮರೆಯಲು ಸಾಧ್ಯವಿಲ್ಲವೋ ಅಂತಹ ನಿಜತತ್ತ್ವವು ಅವಿರ್ಭವಿಸಿದ ಕಾರಣ ಜೀವಭಾವ ನಿಃಷ್ಪತ್ತಿಯಾಗಿ ಪರಮಾತ್ಮ ತತ್ತ್ವ ಭಾವ ನೆಲೆಗೊಂಡಿತ್ತು' ಎನ್ನುವ ಗುರುಬಸವಣ್ಣನವರ ಸಂದೇಶ ವಾಣಿಯಂತೆ ನಿಜ ಜ್ಞಾನದ ಅರಿವಿನೊಳಗೆ ಸದಾ ವಿಹರಿಸುತ್ತಿರುವ ಪೂಜ್ಯರು ಇಷ್ಟಲಿಂಗ ಯೋಗಾನುಭಾವದಲ್ಲಿ ಅಪೂರ್ವ ಸಾಧನೆ ಕಂಡುಕೊಂಡವರಾಗಿದ್ದಾರೆ. ತನು-ಮನ-ಭಾವಗಳನ್ನು ಕಳೆದುಕೊಂಡು ಲಿಂಗಾನುಭಾವದಲ್ಲಿಯೇ ಬದುಕಿನ ಪ್ರತಿಯೊಂದು ಕಾರ್ಯವನ್ನು ನಿರ್ವಹಿಸುತ್ತಿರುವ ಅವರು ಶ್ರೇಷ್ಠ ಲಿಂಗಾನುಭಾವಿ.

ಇಷ್ಟಲಿಂಗೋಪಾಸನೆ ಮತ್ತು ಪೂಜ್ಯರಿಗೆ ಒಂದು ಅವಿನಾಭಾವ ಸಂಬಂಧವಿರುವುದನ್ನು ನಾವು ಕಾಣಬಹುದು. ಗುರು ಬಸವಣ್ಣನವರು ಸಂಶೋಧಿಸಿ ನೀಡಿದ ಇಷ್ಟಲಿಂಗ ಯೋಗದ ಉದ್ದೇಶ ಮತ್ತು ಅದರ ಸಾರ್ಥಕತೆಯ ಒಳವರ್ಮವನ್ನು ಅರಿತವರು ಪೂಜ್ಯರು. ಅವಿಶ್ರಾಂತ ಜಂಗಮ ಸೇವಾ ಕಾರ್ಯದಲ್ಲಿಯೇ ಭಗವಂತನನ್ನು ಕಂಡು ಆರಾಧಿಸುತ್ತಿರುವ ಅವರಿಗೆ ಇಷ್ಟಲಿಂಗೋಪಾಸನೆ ಪ್ರಾಣ ಸಮಾನವಿದ್ದಂತೆ. ಸರಿಸುಮಾರು ೧೯೩೧ ರಿಂದಲೂ ನಿರಂತರವಾಗಿ ಇಷ್ಟಲಿಂಗೋಪಾಸನೆಯ ತನ್ಮಯತೆಯ ಭಾವ ಮತ್ತು ಅವರ ಸಂಸರ್ಗ ಹನ್ನೆರಡನೇ ಶತಮಾನದಲ್ಲಿನ ಶರಣ ಪರಂಪರೆಗೆ ನಮ್ಮನ್ನು ಕರೆದೊಯ್ಯುತ್ತದೆ.

ಆರೋಗ್ಯಪೂರ್ಣ ಮನಸ್ಸನ್ನು ಪ್ರಾಪ್ತಿ ಮಾಡಿಕೊಳ್ಳಲು ಮತ್ತು ಮನಸ್ಸಿನ ಅಂತರಂಗದಲ್ಲಿಯೇ ಸುಪ್ತವಾಗಿರುವ ಪರಮಾತ್ಮ ತತ್ತ್ವವನ್ನು ಅನುಸಂಧಾನಿಸಲು ಗುರು ಬಸವಣ್ಣನವರು ಜಗತ್ತಿಗೆ ನೀಡಿದ ವೈಶಿಷ್ಟಪೂರ್ಣ ಕೊಡುಗೆ



* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ.





ಇಷ್ಟಲಿಂಗ. ಇಷ್ಟಲಿಂಗ ಯೋಗದ ಮಹತ್ವವನ್ನು ಅತ್ಯಂತ ಅರ್ಥಪೂರ್ಣವಾಗಿ ಅರ್ಥೈಸಿಕೊಂಡಿರುವ ಪೂಜ್ಯರು ಆ ಪಥದಲ್ಲಿ ಕ್ರಿಯಾತ್ಮಕವಾಗಿ ಸಾಗುತ್ತಿರುವ ಇಷ್ಟಲಿಂಗ ಯೋಗ ತಪಸ್ವಿ ಎನ್ನಬಹುದು. ಅವಿರತ ಶ್ರಮ, ದಣಿವರಿಯದ ಮನಸ್ಸು ಮತ್ತು ಆತ್ಮವಿಶ್ವಾಸದ ಅಖಂಡವಾದ ಅವರ ಸಂಕಲ್ಪ ಶಕ್ತಿಯನ್ನು ಕಂಡಾಗ ಒಂದು ಕ್ಷಣ ವಿಸ್ಮಯ ಎನಿಸಿಬಿಡುತ್ತದೆ. ನೂರಾರು ವ್ಯಕ್ತಿಗಳು ಸೇರಿ ಮಾಡಲು ಅಸಾಧ್ಯವಾದ ಕೆಲಸ ಕಾರ್ಯಗಳನ್ನು ಏಕಾಂಗಿಯಾಗಿ ಅವರು ಸಾಧಿಸಿ ತೋರಿಸಿರುವುದು ನಿಜಾರ್ಥದ ಒಂದು ಪವಾಡ. ಅವರೊಳಗಿನ ಸಂಪೂರ್ಣತೆಯ ಸಂಕಲ್ಪಶಕ್ತಿ ಮತ್ತು ಸೇವಾ ತಾದಾತ್ಮ್ಯತೆಗೆ ಸದಾ ಸ್ಫೂರ್ತಿದಾಯಕವಾಗಿರುವುದು ಅವರೊಳಗಿನ ಇಷ್ಟಲಿಂಗ ಯೋಗದ ತಪಸ್ಸು ಎನ್ನಬಹುದು.

ಮನಸ್ಸನ್ನು ಇಷ್ಟಲಿಂಗದಲ್ಲಿ ಕೇಂದ್ರೀಕರಿಸಿ ಮನದಂತರಂಗದ ಅಂತರ್ಯಾಮಿಯಾದ ಪರಮಾತ್ಮನನ್ನು ಅರ್ಥೈಸಿಕೊಳ್ಳುವುದೇ ಇಷ್ಟಲಿಂಗಯೋಗದ ಸಾರ್ಥಕತೆಯ ಉದ್ದೇಶವಾಗಿರುತ್ತದೆ. ಈ ತತ್ತ್ವ ಚಿಂತನೆಯ ಹಾದಿಯಲ್ಲಿ ಸಾಗಿ ಯಶಸ್ಸು ಕಂಡಿರುವ ಪೂಜ್ಯರು ತ್ರಿಕಾಲದಲ್ಲಿ ಪೂಜೆಯನ್ನು ಅತ್ಯಂತ ಭಕ್ತಿ ಮತ್ತು ಶ್ರದ್ಧೆಯಿಂದ ಆಚರಿಸಿಕೊಂಡು ಬರುತ್ತಿರುವ ಒಬ್ಬ ಶ್ರೇಷ್ಠ ಶರಣರಾಗಿದ್ದಾರೆ. ಪ್ರಾತಃಕಾಲದಲ್ಲಿ ಎದ್ದು ಅಂದರೆ ಬೆಳಗಿನ ಜಾವ ೩.೦೦ ರಿಂದ ೫.೦೦ ರವರೆಗಿನ ಅವರ ಪೂಜಾ ಅನುಸಂಧಾನ ಎಂದರೆ ಅದು ಪರಮಾತ್ಮ ತತ್ತ್ವ ಜೊತೆಗಿನ ಭಕ್ತಿ ಸಂಭಾಷಣೆ ಇದ್ದಂತೆ ಎಂದು ಅರ್ಥೈಸಬಹುದು.

**ಬೆಳಗಿನೊಳಗಣ ಬೆಳಗು ಮಹಾಬೆಳಗು !**
**ಶಿವಶಿವಾ, ಪರಮಾಶ್ರಯವೇ ತಾನಾಗಿ,**
**ಶತಪತ್ರ ಕಮಳಕರ್ಣಿಕಾ ಮಧ್ಯದಲ್ಲಿ**

ಜಗತ್ತಿನ ತುಂಬೆಲ್ಲಾ ತುಂಬಿರುವ ಲಿಂಗದೇವನ ಬೆಳಕು ನಮ್ಮ ಅಂತರಂಗದಲ್ಲಿಯೂ ಪ್ರವಹಿಸಬೇಕು. ಆಗ ನಮ್ಮ ತನು-ಮನಗಳೆಲ್ಲವೂ ಲಿಂಗಮಯಗೊಳ್ಳುತ್ತದೆ. ಅಂತಹ ಪರಮಾತ್ಮ ತತ್ತ್ವದ ಜ್ಞಾನ ಬೆಳಕಿನಲ್ಲಿ ಸದಾ ವಿಹರಿಸಿ, ತನುಮನ ತುಂಬೆಲ್ಲಾ ಪರಮಾತ್ಮ ಜ್ಞಾನದ ಕಿರಣಗಳನ್ನು ತುಂಬಿಕೊಂಡಿರುವ ಪೂಜ್ಯರು ಪರಮಾತ್ಮನ ಸಾಕಾರ ರೂಪವೇ ಆಗಿದ್ದಾರೆ. 'ಪರಮಾತ್ಮ ವಾಸವಿರುವುದು ಶರಣನ ಮನಸ್ಸಿನಲ್ಲಿ' ಎಂದು ತಿಳಿಸುವ ಗುರುಬಸವಣ್ಣನವರ ವಚನ ಸಂದೇಶದಂತೆ ಪರಮಾತ್ಮ ತತ್ತ್ವ ಪೂಜ್ಯರಂತಹ ಮಹಾತ್ಮರಲ್ಲಿ ನೆಲೆಗೊಂಡಿರುತ್ತದೆ. ಈ ಸತ್‌ಕಾರಣಕ್ಕಾಗಿಯೇ ಪೂಜ್ಯರನ್ನು ನಡೆದಾಡುವ ದೇವರು ಎಂದು ಸಂಬೋಧಿಸುವುದು ನಿಜಕ್ಕೂ ಅರ್ಥಪೂರ್ಣ.

**ಶ್ರೇಷ್ಠ ಸಮಾಜ ಸುಧಾರಕ :**

**ಲಿಂಗವ ಪೂಜಿಸುತ್ತ,**
**ಜಂಗಮವ ಮುಖವ ನೋಡುತ್ತಿಪ್ಪ**
**ಸುಖವ ಕೊಡು ಲಿಂಗವೇ,**
**ಪರಮ ಸುಖವ ಕೊಡು, ಕಂಡಾ ಲಿಂಗವೇ**
**ಇದೇ ವರವ ನಿಮ್ಮಲ್ಲಿ ಬೇಡುವೆ.**

'ಪರಮಾತ್ಮನ ಸಾಕಾರ ರೂಪವಾದ ಈ ಜಗತ್ತಿನ ಸೇವಾ ಕಾರ್ಯಗಳನ್ನು ನಿಸ್ವಾರ್ಥ ಭಾವದಿಂದ ಮಾಡುವುದೇ ಪರಮಾತ್ಮನಿಗೆ ಸಲ್ಲಿಸುವ ಅರ್ಥಪೂರ್ಣವಾದ ನಮನ' ಎಂದು ಭಾವಿಸಿರುವ ಪೂಜ್ಯರು ಲಿಂಗಪೂಜೆ ಮತ್ತು ಜಂಗಮ ಸೇವೆಗಳೆರಡನ್ನು ಬದುಕಿನಲ್ಲಿ ಸಮೀಕರಿಸಿಕೊಂಡು ಸಾಗುತ್ತಿರುವ ಒಬ್ಬ ಶ್ರೇಷ್ಠ ಸಮಾಜ ಸುಧಾರಕರೆನಿಸಿ ಕೊಂಡಿದ್ದಾರೆ. ಗುರು ಬಸವಣ್ಣನವರ ಆದರ್ಶ ತತ್ತ್ವ ಪಥದಲ್ಲಿ ಸಾಗುತ್ತಿರುವ ಅವರು ಸುಮಾರು ೮೭ ವರ್ಷಗಳಿಂದಲೂ ಸಲ್ಲಿಸುತ್ತಿರುವ ಅವಿಶ್ರಾಂತ ಜಂಗಮ ಸೇವಾ ಕಾರ್ಯಗಳು ಅನನ್ಯ. ಯಾವುದೇ ಜಾತಿ, ಮತ, ಪಂಥ ಮತ್ತು ಧರ್ಮ ಭೇದವಿಲ್ಲದೇ ಎಲ್ಲರಿಗೂ ಶಿಕ್ಷಣದ ದಾಸೋಹ ನೀಡುತ್ತಿರುವ ಅವರು ಪರಿಪೂರ್ಣ ಅರ್ಥದ ಜಂಗಮ ದಾಸೋಹಿ ಎನಿಸಿಕೊಂಡಿದ್ದಾರೆ. ದಾರಿ ತಪ್ಪಿದ ಅಗಣಿತ ಸಂಖ್ಯೆಯ ಮಕ್ಕಳನ್ನು ಸರಿದಾರಿಗೆ ತರುವ ಕಾರ್ಯ ಅಷ್ಟು ಸುಲಭದ ಕಾರ್ಯವಲ್ಲ ! ಅಂತಹ ಮಹತ್ವಪೂರ್ಣ ಕಾರ್ಯವನ್ನು ಶ್ರೀಗಳು ಮಾಡುತ್ತಿದ್ದಾರೆ. ಲಕ್ಷಾಂತರ ವಿದ್ಯಾರ್ಥಿಗಳನ್ನು ಸಮಾಜದ ಮುಖ್ಯವಾಹಿನಿಗಳೊಳಗೆ ತಂದು ಅವರೆಲ್ಲರನ್ನೂ ಆತ್ಮವಿಶ್ವಾಸದಿಂದ ಬದುಕುವಂತೆ ಮಾಡಿರುವ ಅವರ ಸಮಾಜಮುಖಿ ಕಾರ್ಯ ಅತ್ಯಂತ ಶ್ಲಾಘನೀಯ. 'ಶಾಲೆ ಎನ್ನುವುದು ಕರ್ತಾರನ ಕಮ್ಮಟವಿದ್ದಂತೆ' ಎಂದು ಭಾವಿಸಿ ಶಿಕ್ಷಣದ ಜೊತೆ ನೈತಿಕ ಸಂಸ್ಕಾರಗಳನ್ನು ಕಲಿಸುವುದರ ಮೂಲಕ ದೇಶವನ್ನು ಸುಭದ್ರವಾಗಿ ನಿರ್ಮಿಸುವ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿಯೂ ಅವರಿಂದು ಮುಖ್ಯ ಪಾತ್ರ ನಿರ್ವಹಿಸುತ್ತಿದ್ದಾರೆ.

ವಿದ್ಯಾರ್ಥಿ ಮಿತ್ರರೊಂದಿಗೆ ನೈತಿಕ ವಿಚಾರದ ಸಂವಾದ, ಕೃಷಿಕರೊಂದಿಗೆ ಕೃಷಿ ಬದುಕಿನ ಚಿಂತನೆ, ಧರ್ಮ ಬಂಧುಗಳೊಂದಿಗೆ ಧಾರ್ಮಿಕ ವಿಚಾರಗಳ ಮಂಥನ, ರಾಜಕೀಯ ವ್ಯಕ್ತಿಗಳೊಂದಿಗೆ ಆದರ್ಶ ರಾಷ್ಟ್ರ ನಿರ್ಮಾಣದ ವಿಚಾರಗಳ ಸಮಾಲೋಚನೆಯೊಂದಿಗೆ ಇಂದು ಒಂದು ಸುಂದರ ಆದರ್ಶ ರಾಷ್ಟ್ರ ನಿರ್ಮಿಸುವ ಕನಸು ಹೊತ್ತವರು ಪೂಜ್ಯ ಶ್ರೀಗಳು. ಗುರು ಬಸವಣ್ಣನವರ ನಾಮ ಸ್ಮರಣೆಯನ್ನೇ ಜಪವನ್ನಾಗಿಸಿಕೊಂಡಿರುವ ಅವರು ಬಸವಾದಿ ಶರಣರ

ಚಿಂತನೆಗಳನ್ನು ಕ್ರಿಯಾತ್ಮಕವಾಗಿ ಅರಳಿಸುವ ಕಾರ್ಯದಲ್ಲಿಯೂ ತಪೋನಿಷ್ಠರಾಗಿರುವ ಕಾಯಕ ಯೋಗಿ, ಅಸಂಖ್ಯಾತ ಜನಪರ ಯೋಜನೆ ಮತ್ತು ಕಾರ್ಯಗಳ ಮೂಲಕ ಸಮಾಜಮುಖಿ ಎನಿಸಿಕೊಂಡಿರುವ ಅವರು ನಾಡಿನ ಒಬ್ಬ ಶ್ರೇಷ್ಠ ಜಂಗಮ ಯೋಗಿ ಎನಿಸಿಕೊಂಡಿದ್ದಾರೆ. ಅವರ ಪ್ರವಚನದ ನುಡಿ ತತ್ತ್ವದಲ್ಲಿ ಎಲ್ಲರ ತನು ಮನಗಳನ್ನು ಪವಿತ್ರೀಕರಿಸುವ ದಿವ್ಯಶಕ್ತಿ ಅಡಗಿರುವುದು ಎಲ್ಲರಿಗೂ ವೇದ್ಯವಾದ ಸಂಗತಿ.

ಉಪ್ಪು, ಹುಳಿ, ಖಾರ ರಹಿತ ದೇಶಿಯ ಸಾತ್ವಿಕ ಆಹಾರ ಪದ್ಧತಿ, ಬೇವಿನ ಕಷಾಯ, ಹಸಿ ತರಕಾರಿ, ಹಾಲು-ಮಜ್ಜಿಗೆ, ಹಣ್ಣುಗಳನ್ನು ಸೇವಿಸುವುದು ಮತ್ತು ಸಾತ್ವಿಕ ಚಿಂತನೆಗಳಿಂದ ಉತ್ತಮ ದೇಹಾರೋಗ್ಯದ ಸಾತ್ವಿಕ ಮನಸ್ಸನ್ನು ಹೊಂದಬಹುದು ಎಂಬ ಸಂದೇಶ ಪೂಜ್ಯರದು.

ಸದಾ ಹಸನ್ಮುಖಿಯಾಗಿ, ಸರಳ, ಸಹಜ, ಶರಣರಂತೆ ಬದುಕುವ ಹಾದಿಯಲ್ಲಿ ಸಾಗುತ್ತಿರುವ ಪೂಜ್ಯರು ನಾಡಿನ ಅಮೂಲ್ಯವಾದ ಸಂಪತ್ತು. ಅವರ ಕಾಲಘಟ್ಟದಲ್ಲಿ ನಾವು ಬದುಕು ಸಾಗಿಸುತ್ತಿರುವಾಗಲೇ ನೆಮ್ಮೆಲ್ಲರಿಗೂ ಹೆಮ್ಮೆಯ ಸಂಗತಿ. ಪೂಜ್ಯರು ತೋರಿಸಿರುವ ಆದರ್ಶ ಮಾರ್ಗದಲ್ಲಿ ನಾವು ಸಾಗಬೇಕು. ಅವರು ನಮಗೆ ನೀಡಿದ ಆದರ್ಶ ತತ್ತ್ವಗಳ ಸಂದೇಶದ ಮಾರ್ಗದಲ್ಲಿ ಅರ್ಥಪೂರ್ಣವಾಗಿ ಸಾಗಿದಾಗ ಮಾತ್ರ ನಿಜಕ್ಕೂ ನಾವು ಅವರಿಗೆ ಸಲ್ಲಿಸುವ ನಿಜವಾದ ಗುರುಭಕ್ತಿಯ ನಮನಗಳಾಗುತ್ತವೆ.

## ಶ್ರೀ ಶ್ರೀ ಶಿವಕುಮಾರರಿಗೆ 'ಭಕ್ತಿನಮನ'

ಇವರೆ 'ಶಿವಕುಮಾರರು'
ನಿಜದಲ್ಲಿ 'ಶಿವನ ಕುಮಾರರು'
ಶತಾಯುಷಿ ಶತಸಿದ್ಧಿಯ ಪರಮಸಾಧಕರು ॥ ಪ ॥

ಸಿದ್ಧಗಂಗೆಯ ಯೋಗಿವರೇಣ್ಯರು,
ಕಾಯಕ ದಾಸೋಹದ ಪರಮ ಚಿಂತಕರು
ಅಣ್ಣ ಬಸವಣ್ಣನ ನಿಜಪಾಲಕರು
ಶರಣ ಸಮೂಹದ ವಾರಸುದಾರರು ॥ ೧ ॥

'ಇವ ನಮ್ಮವ ಇವ ನಮ್ಮವ' ಎನ್ನುತ್ತ
ಎಲ್ಲರಿಗೂ ಇಂಬುಕೊಟ್ಟವರು !
'ದಯೆಯೇ ಧರ್ಮ'ವೆಂದು ಎಲ್ಲರಿಗೂ
ಜ್ಞಾನ ಭಿಕ್ಷೆಯನಿತ್ತವರು ॥ ೨ ॥

'ಗುರು' ಎಂಬ ಪದಕೆ ಅರ್ಥ ಕೊಟ್ಟವರು
'ಜಂಗಮ'ವಾಣಿ ಇಳೆಯಲ್ಲಿ ನಿಂತವರು,
'ಲಿಂಗ'ವಾಗಿ ಹೃದಯದಲ್ಲಿ ವಾಸವಾದವರು,
ಕೀರ್ತಿವಾರ್ತೆಯಿಂದ ದೂರವಿರುವವರು ॥ ೩ ॥

ಬಾಗಿದ ತಲೆಯು ಮುಗಿದ ಕೈ ಬಸವನಂತೆ,
ಸದುವಿನಯದ ಸವಿ ಮಾತಿನ ಸಾಕಾರಮೂರ್ತಿ,
ಕಾವಿಯ ವಸ್ತ್ರದಲ್ಲಿ ಪ್ರಜ್ವಲಿಸುವ 'ಪರಂಜ್ಯೋತಿ'
ದೀನ ದಲಿತರ ಬಾಳಿನ ಬೆಳಕು ! ॥ ೪ ॥

ಅಂದು ಕಲ್ಯಾಣದ 'ಮಹಾಮನೆ'ಯಲ್ಲಿ
ಒಂದು ಲಕ್ಷ ತೊಂಬತ್ತಾರು ಸಾವಿರ ಶರಣರಿಗೆ
ಜ್ಞಾನದಾಸೋಹ, ಅನ್ನ ದಾಸೋಹ !
ಇಂದು ಗುರುಸಿದ್ಧಲಿಂಗನ ಔದಾರ್ಯದ
'ಮಹಾಮಠ'ದಲ್ಲಿ
ಹತ್ತಾರು ಸಾವಿರ ಮಕ್ಕಳಿಗೆ ಅನ್ನದಾಸೋಹ, ಜ್ಞಾನ
ದಾಸೋಹ ! ॥ ೫ ॥

ಸಿದ್ಧಗಂಗೆಯ ಪರಮ ಪೂಜ್ಯರು,
ಕನ್ನಡನಾಡಿನ ಆದರ್ಶ ಮಹಿಮರು,
ಶರಣ ಶ್ರೇಷ್ಠರು, ಪರಮ ಪವಿತ್ರರು,
ನಮ್ಮೆಲ್ಲರ ಪಾಲಿನ ಪುಣ್ಯ ವಿಶೇಷರು ! ॥ ೬ ॥

ಗುರು ನಿಮ್ಮ ಕೃಪೆಯಿರಲಿ ನಿರಂತರ,
ಆ ಕರುಣಾಳು ನಿಮಗೆ ನೀಡಲಿ ಆಯುಷ್ಯ, ಆರೋಗ್ಯ
ಇದುವೇ ಸದಾಶಯ, ನಮ್ಮೆಲ್ಲರ ಸೌಭಾಗ್ಯ !
ಇದೇ ನಮ್ಮೆಲ್ಲರ 'ಶುಭಾಶಯ' ! ॥ ೭ ॥

ಜಯತು ಜಯ ಜಯತು,
ಶ್ರೀ ಶ್ರೀ ಶ್ರೀ ಶಿವಕುಮಾರ ಗುರುವಿಗೆ,
ಶಿವನ ನಿಜ ಕುಮಾರಗೆ !
ಮಂಗಳ ಬೆಳಕಿಗೆ ! ಜಯತು, ಜಯ ಜಯತು.. ॥ ೮ ॥

- ಶ್್ರೀಮತಿ ಗೌರಾ ಉ. ಹಾಲಭಾವಿ
ಶಾಂತಿನಿವಾಸ, ಧಾರವಾಡ





# ನಿಜಗುಣ ಶಿವಯೋಗಿ

- ಮಲೆಯೂರು ಗುರುಸ್ವಾಮಿ *

ನಿಜಗುಣ ಎನ್ನುವವರು ಕನ್ನಡ ಸಾಹಿತ್ಯದಲ್ಲಿ ಮೂವರು ಕಂಡು ಬರುತ್ತಾರೆ.

೧. ೧೧೬೦ರಲ್ಲಿ ಇದ್ದ ನಿಜಗುಣದೇವ. ಈತನು ವಚನಗಳನ್ನು ಬರೆದಿದ್ದಾನೆ. ಅಂಕಿತ ನಿಜಗುಣ ಯೋಗಿ.

೨. ಅದ್ವೈತ ರಾಮಾಯಣವನ್ನು ಬರೆದ ನಿಜಗುಣಾರ್ಯ. ಕಾಲ ೧೬೫೦.

೩. ಷಟ್‌ಶಾಸ್ತ್ರಗಳನ್ನು ಬರೆದ ನಿಜಗುಣ ಶಿವಯೋಗಿ ಕಾಲ ೧೫೦೦.

ಈ ಲೇಖನದಲ್ಲಿ ಪ್ರಸ್ತಾಪಿಸಿರುವ ನಿಜಗುಣ ಶಿವಯೋಗಿ ಷಟ್‌ಶಾಸ್ತ್ರಗಳನ್ನು ಬರೆದವನು. ಈತನ ಸ್ಥಳ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನಲ್ಲಿರುವ ಚಿಲಕವಾಡಿ ಗ್ರಾಮಕ್ಕೆ ಸೇರಿದ ಶಂಭುಲಿಂಗನ ಬೆಟ್ಟ.

ಈತನ ಕಾಲದ ಬಗ್ಗೆ ಅನೇಕ ಜನ ವಿದ್ವಾಂಸರು ಈ ಕೆಳಕಂಡ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

೧. ಶ್ರೀ ಗಂಗಾಧರೇಶ್ವರ ಮಡಿವಾಳೇಶ್ವರ ತುಮರಿಯವರು ತಾವು ಸಂಪಾದಿಸಿರುವ **'ಕೈವಲ್ಯ ಪದ್ಧತಿ ಟೀಕೆ'** ಕೃತಿಯ ಪೀಠಿಕೆಯಲ್ಲಿ ೯೦೦ ವರ್ಷಗಳ ಹಿಂದೆ ಇದ್ದನು ಎಂದಿದ್ದಾರೆ.

೨. ಬುದ್ಧಯ್ಯ ಸ್ವಾಮಿ ಪುರಾಣಿಕರು ೧೫೦೦ ಕ್ಕಿಂತಲೂ ಹಿಂದೆ ಎನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ.

೩. ಬಿ. ಶಿವಮೂರ್ತಿ ಶಾಸ್ತ್ರಿಗಳು ಹದಿಮೂರನೆಯ ಶತಮಾನದವನು ಎಂದಿದ್ದಾರೆ. (**ಪುರಾತನ ತ್ರಿವಿಧಿ** - ಸಂಪಾದಿತಕೃತಿ).

೪. ಎಸ್.ಸಿ. ನಂದೀಮಠರವರು ೧೩ನೇ ಶತಮಾನಕ್ಕಿಂತ ಹಿಂದಕ್ಕೆ ಹೋಗಲಾರದು ಎನ್ನುತ್ತಾರೆ ***(ಪಾರಮಾರ್ಥ ಪ್ರಕಾಶಿಕೆಯ ಪ್ರಸ್ತಾವನೆ).***

೫. ಮಧುರಚೆನ್ನರು ೧೩೫೫ ಎನ್ನುತ್ತಾರೆ. ***(ವಿವೇಕ ಚಿಂತಾಮಣಿ : ಜಿ.ಎಂ. ಉಮಾಪತಿ ಶಾಸ್ತ್ರಿ - ಉದ್ಧೃತ).***

೬. ಬಿ.ಎಚ್.ಎಂ. ಸದಾಶಿವಯ್ಯನವರು, ೧೪೦೦ ಎಂದಿದ್ದಾರೆ. ***(ಮೇಲೆ ಉದಾಹರಿಸಿರುವ ಕೃತಿ).***

೭. ಇ.ಪಿ. ರೈಸ್ ೧೨೫೫ ರಿಂದ ೧೬೫೫ರ ನಡುವೆ ಎನ್ನುತ್ತಾರೆ. ***(ಮೇಲೆ ಉದಾಹರಿಸಿರುವ ಕೃತಿ).***

೮. ರಂ.ಶ್ರೀ ಮುಗಳಿಯವರು ೧೪ ರಿಂದ ೧೭ನೇ ಶತಮಾನದ ನಡುವಿನವನು ಎನ್ನುವ ಅಭಿಪ್ರಾಯವನ್ನು ಹೊಂದಿದ್ದರು. ***(ಪರಮಾರ್ಥ ಪ್ರಕಾಶನ : ಸಂ. ಜಿ.ಎಂ. ಉಮಾಪತಿ ಶಾಸ್ತ್ರಿ).***

೯. ಪಿ.ಆರ್. ಕರಿಬಸವಶಾಸ್ತ್ರಿಗಳು ೧೬ ಮತ್ತು ೧೮ನೇ ಶತಮಾನದ ನಡುವಿನ ಕಾಲದಲ್ಲಿ ಇದ್ದವನು ಎನ್ನುತ್ತಾರೆ. ***(ಮೇಲೆ ಉದಾಹರಿಸಿರುವ ಕೃತಿಯಲ್ಲಿ ಉದ್ಧೃತ).***

೧೦. ಆರ್. ನರಸಿಂಹಾಚಾರ್ಯರು ೧೫೦೦ ಎಂದು ಊಹಿಸಿದ್ದಾರೆ. ***(ಉಮಾಪತಿ ಶಾಸ್ತ್ರಿಯವರ ಸಂಪಾದಿತ ಕೃತಿಯಲ್ಲಿ ಉದ್ಧೃತ).***

ಈ ಎಲ್ಲ ವಿದ್ವಾಂಸರ ಅಭಿಪ್ರಾಯಗಳಲ್ಲಿ ನಿಜಗುಣ ಶಿವಯೋಗಿಯ ಕಾಲ ೧೦ನೇ ಶತಮಾನದಿಂದ ೧೬ನೇ ಶತಮಾನದ ತನಕ ತೂಗುಯ್ಯಾಲೆಯಾಡುತ್ತದೆ. ಆದರೆ ಹೆಚ್ಚಿನವರು ಅವರ ಭಾಷೆ, ತಾತ್ತ್ವಿಕ ಸಂಗತಿಗಳು ಮುಂತಾದವುಗಳ ಜೊತೆಗೆ ಸಾಂದರ್ಭಿಕ ಆಧಾರಗಳ ಹಿನ್ನೆಲೆಯಲ್ಲಿ ಅವರ ಕಾಲವನ್ನು ೧೫೦೦ ರಿಂದ ೧೫೫೦ ನಡುವೆ ಎನ್ನುವ ತೀರ್ಮಾನಕ್ಕೆ ಬಂದಿದ್ದಾರೆ.

ನಿಜಗುಣರು ವೀರಶೈವರಲ್ಲಿ ಗುರುಪರಂಪರೆಗೆ ಸೇರಿದ ಆರಾಧ್ಯ ಪಂಗಡಕ್ಕೆ ಸೇರಿದವರು. ಅನೇಕ ಕಡೆ ಅವರ ಹೆಸರು ನಿಜಗುಣಾರಾಧ್ಯ ಎಂದು ನಮೂದಿತವಾಗಿದೆ. ಇವರು ಕೊಳ್ಳೇಗಾಲ, ಎಳಂದೂರು ಪ್ರಾಂತ್ಯಕ್ಕೆ ಸೇರಿದ ಗಾಳಿಪುರ ಎನ್ನುವ ಪ್ರದೇಶಕ್ಕೆ ರಾಜನಾಗಿದ್ದರು (ಪಾಳೆಯಗಾರ) ಎನ್ನುವ ಹೇಳಿಕೆ ವ್ಯಾಪಕವಾಗಿ ಕಂಡು ಬರುತ್ತದೆ. ಜಂಗಮ ಪ್ರೇಮಿಯಾಗಿದ್ದ ನಿಜಗುಣರು ಸದಾ ಗುರುಲಿಂಗ ಜಂಗಮ ಸೇವೆಯಲ್ಲಿ ನಿರತರಾಗುತ್ತಿದ್ದರಂತೆ. ಆದರೆ ಅವರ ಪತ್ನಿಯಿಂದ ಇದಕ್ಕೆ ಪೂರಕವಾದ ಪ್ರತಿಕ್ರಿಯೆ ಸಿಗದಿದ್ದ ಕಾರಣಕ್ಕೆ ವೈರಾಗ್ಯಪರರಾಗಿ ರಾಜತ್ವವನ್ನು ಹಾಗೆಯೇ ಸಂಸಾರವನ್ನು ತ್ಯಜಿಸಿದರಂತೆ ಎನ್ನುವ ಐತಿಹ್ಯ ಜನಜನಿತವಾಗಿದೆ. (**ಜ್ಯೋತಿ ಬೆಳಗುತಿದೆ** ಕಾದಂಬರಿ - ಡಾ॥ ಎಚ್. ತಿಪ್ಪೇರುದ್ರಸ್ವಾಮಿ). ಆದರೆ ಇದಕ್ಕೆ ವಿರುದ್ಧವಾದ

* ೬೩೫, ಮಹಾಮನೆ, ಆಶ್ರಮ ರಸ್ತೆ, ಹಿನಕಲ್, ಮೈಸೂರು-೫೭೦೦೧೭

ಅಭಿಪ್ರಾಯವನ್ನು ಡಾ|| ಎಲ್. ಬಸವರಾಜುರವರು ಮಂಡಿಸುತ್ತಾರೆ.

"ನಿಜಗುಣರ ಸಂಸಾರಿಯದ ಯಾಜ್ಞವಲ್ಕರನ್ನು **'ಶ್ರೀಮದಾಚಾರ್ಯ ಶಿಖಾಮಣಿ'** ಎನ್ನುವ ಅವರ ಹೆಂಡತಿ ಮೈತ್ರೇಯಿಯುನ್ನು ಪರಮವಿರಕ್ತಳೂ ಎಂದು ಸ್ತುತಿಸಿರುವವರು. ಈ ಮಾತಿನ ಆತ್ಮೀಯತೆಯನ್ನು ಪರಿಭಾವಿಸಿದರೆ ನಿಜಗುಣರು ಕೊನೆಯುವರೆಗೆ ಪರಮವಿರಕ್ತಳಾದ ಹೆಂಡತಿಯೊಡನೆ ನಿರಂಜನ ಸಂಸಾರಿಯೇ ಆಗಿದ್ದು ಆದರ್ಶ ಜೀವನವನ್ನು ನಡೆಸಿ ಉಪನಿಷತ್ ಕಾಲದ ಋಷಿಗಳಂತೆ ವಚನಕಾರರ ಕಾಲದ ಶರಣರಂತೆ ಪೂಜ್ಯರಾಗಿದ್ದರೆನಿಸುವುದು. (ಸತಿಪತಿಗಳೊಂದಾದ ಇವರ ಭಕ್ತಿ ಸ್ಮರಣೀಯವಾಗಿತ್ತು). ಅವರು ಶಂಭುಲಿಂಗನ ಬೆಟ್ಟದ ಗವಿಯಲ್ಲಿದ್ದರೆಂಬ ಮಾತನ್ನು ನಂಬುವುದಾದರೆ ಅವರು ಹಾಗೆ ಮಾಡಿದ್ದು ತಮ್ಮ ಹೆಂಡತಿ ಶಿವೈಕ್ಯರಾದ ಮೇಲೆ ಎಂದು ನಂಬುವುದು ಸಮಂಜಸವಾದೀತು" (ಕೃತಿ : **"ನಿಜಗುಣ ಶಿವಯೋಗಿ ತತ್ವದರ್ಶನ"**).

ಒಟ್ಟಿನಲ್ಲಿ ಅವರ ಖಾಸಗೀ ಜೀವನ ಹೀಗೆಯೇ ಇತ್ತು ಎನ್ನುವುದಕ್ಕೆ ಯಾವುದೇ ನಿರ್ದಿಷ್ಟ ಸಾಕ್ಷ್ಯಾಧಾರಗಳು ಲಭ್ಯವಿಲ್ಲ; ಅವರ ಕೃತಿಗಳಲ್ಲಿಯೂ ಅಂತಹ ಯಾವ ಸೂಚನೆಗಳೂ ಸಿಕ್ಕುವುದಿಲ್ಲ. ಚಿಲಕವಾಡಿಯ ಶಂಭುಲಿಂಗನ ಬೆಟ್ಟದಲ್ಲಿ ಅನೇಕ ವರ್ಷಗಳು ಸಾಧನೆ ಮಾಡಿದ ನಿಜಗುಣರು ಮುಂದೆ ಬಹುದೊಡ್ಡ ಸಾಧಕರನ್ನು ಕಾಣಲು ಬಯಸಿ ದೇಶ ಸಂಚಾರ ಮಾಡಿದಂತೆ ಕಂಡುಬರುತ್ತದೆ. ಈ ಹುಡುಕಾಟದಲ್ಲಿ ಅವರು ಮಾರ್ಗದರ್ಶನ ಪಡೆಯಲು ಬಯಸಿದ ಸಿದ್ಧ ಪುರುಷರೆಂದರೆ ಸ್ವಾದಿ ಸಂಸ್ಥಾನಕ್ಕೆ ಸೇರಿದ್ದ ಬೂದಿಕೇರಿ ಪಟ್ಟಣದ ಶ್ರೀ ಶಂಭುಲಿಂಗ ಸ್ವಾಮಿಗಳನ್ನು. ಅವರು ಅಲ್ಲಿನ ಮಠವೊಂದರ ಅಧಿಪತಿಯಾಗಿದ್ದರು. ಅವರು ನಿಜಗುಣರ ಸಾಧನೆಯ ಕಠಿಣ ಮಾರ್ಗವನ್ನು ಪರಿಚಯಮಾಡಿಕೊಡುವ ಮೊದಲು ಅನೇಕ ತೆರನ ಪರೀಕ್ಷೆಗಳಿಗೆ ಒಳಗುಮಾಡುತ್ತಾರೆ. ಕಠಿಣತಮ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ನಿಜಗುಣರು ಶ್ರೀ ಭುಜಲಿಂಗ ಸ್ವಾಮಿಗಳಿಂದ ಯೋಗಮಾರ್ಗದ ಅನೇಕ ಸೂಕ್ಷ್ಮಗಳನ್ನು ಅರಿತು, ಮಠದ ಸೇವಾ ಕಾರ್ಯಗಳನ್ನು ನಿಷ್ಠೆಯಿಂದ ಮಾಡಿ ಗುರು ಕಾಣಿಕೆಯನ್ನು ಸಲ್ಲಿಸಿ ಶಂಭುಲಿಂಗನ ಬೆಟ್ಟಕ್ಕೆ ಹಿಂದಿರುಗಿ ತಪೋನುಷ್ಠಾನದಲ್ಲಿ ನಿರತರಾಗುತ್ತಾರೆ.

ನಿಜಗುಣರ ಬಗ್ಗೆ ಅನೇಕ ಪವಾಡ ಕಥೆಗಳೂ ಜನಜನಿತವಾಗಿವೆ. ಇವರು ಅಭ್ಯಾಸದಲ್ಲಿ ನಿರತರಾಗಿರುತ್ತಿದ್ದ ಸಂದರ್ಭಗಳಲ್ಲಿ ಮಾಯದರಸಿಯೊಬ್ಬಳು ಏನೇನೋ ತೊಂದರೆಕೊಡುತ್ತಿದ್ದಳಂತೆ. ಆಗ ನಿಜಗುಣರು ತಮ್ಮ ಅಭ್ಯಾಸ ಮುಗಿಯುವವರೆಗೂ ತಮ್ಮ ಬಳಿ ಇರುವ ಬೆತ್ತದಲ್ಲಿ ಅಡಗಿಕೊಂಡಿದ್ದು ಅದರಲ್ಲಿ ಇರುವ ಗೆಜ್ಜೆಗಳನ್ನು ಶಬ್ದ ಮಾಡುತ್ತಿರಬೇಕೆಂದು ಆಜ್ಞಾಪಿಸಿದರಂತೆ. ಈ ಆಜ್ಞೆಗೆ ತಲೆಬಾಗಿದ ಆ ರಕ್ಕಸಿ ಹಾಗೆಯೇ ಮಾಡಿದಳಂತೆ. ಹೀಗೆಯೇ ಆಕೆ ಅನೇಕ ವರ್ಷಗಳು ಇವರ ಆಜ್ಞೆಯನ್ನು ನೆರವೇರಿಸಿ ಕೊನೆಗೆ ತನ್ನ ಸೋಲನ್ನು ಒಪ್ಪಿಕೊಂಡು ಶರಣಾದಳಂತೆ.

ಒಮ್ಮೆ ನಿಜಗುಣರು ಪ್ರವಾಸದ ಸಂದರ್ಭದಲ್ಲಿ ಶಿವಪೂಜೆಯ ಸಮಯವಾಗುತ್ತದೆ. ಆಗ ದೇವರಿಗೆ ಅರ್ಪಿಸಲು ನೈವೇದ್ಯಕ್ಕೆ ಏನಾದರೂ ಬೇಕೆಂದು, ಅಲ್ಲಿಯೇ ಕಂಡುಬಂದ ಕಮ್ಮಾರನ ಕುಲುಮೆಯ ಹತ್ತಿರ ಹೋಗಿ ಭಿಕ್ಷೆ ಕೇಳುತ್ತಾರೆ. ಅವನು ಇವರ ಕೈ ಮೇಲೆ ಕಾದ ಕಬ್ಬಿಣದ ರಸವನ್ನು ಸುರಿದು, ಭಿಕ್ಷೆ ಸಾಕೇ ಅಥವಾ ಇನ್ನೂ ಬೇಕೆ ಎಂದು ಕೇಳುತ್ತಾನೆ. ನಿಜಗುಣರು ಮರುಕ್ಷಣವೇ ಆ ರಸವನ್ನು ಬಾಯಿಗೆ ಹಾಕಿಕೊಂಡು, ಶಿವಾರ್ಪಿತವಾಯಿತು ಎನುತ್ತಾರೆ. ಇಂತಹ ಹತ್ತು ಹಲವು ಕಥೆಗಳು ಇವರ ಜೀವನ ಚರಿತ್ರೆಯ ಸುತ್ತು ಹಬ್ಬಿ ನಿಂತಿವೆ. ಇವುಗಳನ್ನು ಅವರು ತಮ್ಮ ಶಕ್ತಿಯಿಂದ ಮಾಡುತ್ತಿದ್ದರು ಎನ್ನುವ ಸಮರ್ಥನೆಗಳೂ ಇವೆ.

ಅಧ್ಯಾತ್ಮ ಕ್ಷೇತ್ರದಲ್ಲಿ ಬಹು ಎತ್ತರಕ್ಕೆ ಏರಿದುದರ ಜೊತೆಗೆ ಇವರು ಷಟ್‌ಶಾಸ್ತ್ರ ಕೋವಿದರೂ ಆಗಲು ಕಾರಣರಾದ ಇವರ ಗುರುಗಳು ಯಾರಿರಬಹುದು ಎನ್ನುವುದರ ಬಗ್ಗೆಯೂ ಸಾಕಷ್ಟು ಚರ್ಚೆಗಳಿವೆ. ತಮ್ಮ ವಿವೇಕ ಚಿಂತಾಮಣಿ ಕೃತಿಯಲ್ಲಿ **'ನಿರಾಭಾರಿ ದೇಶಿಕೋತ್ತಮ ಗುರುಪರಂಪರೆಗೆ'** ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಾರೆ. ಪರಮಾನುಭವ ಬೋಧೆಯಲ್ಲಿ **'ನಿರಾಭಾರಿ ಸದ್ಗುರು'**ವಿಗೆ ನಮನಗಳನ್ನು ಹೇಳುತ್ತಾರೆ. **'ಕೈವಲ್ಯ ಪದ್ಧತಿ'**ಯಲ್ಲಿ 'ನಿರಾಭಾರಿ ದೇಶಿಕವರೇಣ್ಯ'ರ ಸ್ಮರಣೆ ಇದ್ದರೆ, **ಅನುಭವಸಾರ ಕೃತಿಯಲ್ಲಿ** 'ದೇಶಿಕೋತ್ತಮ'ರೆಂದು ನುಡಿದಿರುವುದು ಕಂಡುಬರುತ್ತದೆ.

ಅವರ ಕೃತಿಗಳಲ್ಲಿ ಅವರೇ ಹೇಳಿಕೊಂಡಿರುವ ಈ ತೆರನ ಹೆಸರುಗಳನ್ನು ಗಮನಿಸಿ **'ನಿರಾಭಾರಿದೇಶಿಕೋತ್ತಮ'**ರು ಇವರ ಗುರುಗಳು ಎನ್ನುವ ತೀರ್ಮಾನಕ್ಕೆ ವಿದ್ವಾಂಸರು ಬಂದಿದ್ದಾರೆ. ಆದರೆ ಇವರ ಪೂರ್ವಾಪರಗಳು ಲಭ್ಯವಿಲ್ಲ.

ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬಹುದೊಡ್ಡ ಪಂಡಿತರಾಗಿದ್ದ ನಿಜಗುಣರು ಈ ಎರಡೂ ಭಾಷೆಗಳಲ್ಲಿ ಬರೆದಿರುವ ಕೃತಿಗಳು ಇಂತಿವೆ –

*೧. ಅನುಭವ ಸಾರ (ತ್ರಿಪದಿ)*

*೨. ಪರಮಾನುಭವ ಬೋಧೆ (ಸಾಂಗತ್ಯ)*





*೩. ಅರವತ್ತು ಮೂವರ ತ್ರಿಪದಿ*

*೪. ಕೈವಲ್ಯ ಪದ್ಧತಿ (ಹಾಡುಗಳು)*

*೫. ಪರಮಾರ್ಥಗೀತೆ (ಲಲಿತ ರಗಳೆ)*

*೬. ಪಾರಮಾರ್ಥ ಪ್ರಕಾಶಿಕೆ (ವ್ಯಾಖ್ಯಾನ)*

*೭. ವಿವೇಕ ಚಿಂತಾಮಣಿ (ಗದ್ಯ)*

ಸ್ವರೂಪ ಸಿದ್ಧಿ ಟೀಕೆ (ಪರಂಜ್ಯೋತಿ ಕವಿಯ ಅನುಭವ ಮುಕುರದ ಮೂರನೆಯ ಪ್ರಕರಣದ ಟೀಕು)

ಇವಿಷ್ಟೂ ಕನ್ನಡದ ಕೃತಿಗಳಾದರೆ, **'ದರ್ಶನಸಾರ'** ಮತ್ತು **'ಆತ್ಮತರ್ಕ ಚಿಂತಾಮಣಿ'** ಇವು ಸಂಸ್ಕೃತ ಭಾಷೆಯ ಅಲಭ್ಯ ಕೃತಿಗಳಾಗಿವೆ.

ಡಾ|| ಎಲ್. ಬಸವರಾಜುರವರು ತಮ್ಮ ನಿಜಗುಣ ಶಿವಯೋಗಿಯ **'ತತ್ತ್ವದರ್ಶನ'** ಕೃತಿಯಲ್ಲಿ ಹೀಗೆ ಹೇಳುತ್ತಾರೆ –

*"ವೇದ ಉಪನಿಷತ್ತು ಮತ್ತು ಶಿವಾಗಮಾದಿಗಳ ಅನುಸಾರವಾಗಿ ವೀರಶೈವ ಧರ್ಮದ ಸಾರವನ್ನೆಲ್ಲ ತಮ್ಮ ಈ ಕನ್ನಡ ಗ್ರಂಥಗಳಲ್ಲಿ ನಿಜಗುಣರು ಮುಮುಕ್ಷುಗಳ ಉಪಯೋಗಕ್ಕಾಗಿಯೇ ಸಂಗ್ರಹಿಸಿ ಸಮೀಕ್ಷಿಸಿ ಜೋಡಿಸಿಕೊಟ್ಟಿರುವುದು". "ವೀರಶೈವ ಧರ್ಮವು ವೇದಾಂತ ಮತ್ತು (ಷಟ್‌ಸ್ಥಲ ಸಮನ್ವಿತ) ಶಿವಸಿದ್ಧಾಂತವೆರಡರ ಸಮನ್ವಯವೆನ್ನುವುದಾದರೆ ನಿಜಗುಣರ ಅನುಭವಸಾರ, ಪರಮಾರ್ಥಗೀತೆ ಮತ್ತು ಪರಮಾನುಭವ ಬೋಧೆ ಎಂಬ ಮೂರು ಗ್ರಂಥಗಳು ಸಮಗ್ರವಾಗಿ ವೇದಾಂತ ಪರವಾದವು. ವಿವೇಕ ಚಿಂತಾಮಣಿ ಮತ್ತು ಕೈವಲ್ಯ ಪದ್ಧತಿ' ಎರಡೂ ಮುಖ್ಯವಾಗಿ ಆಗಮಿಕ ಮೂಲಕ ಶಿವಸಿದ್ಧಾಂತ ಪರವಾದವೂ ಆಗಿವೆ".*

ನಿಜಗುಣರ ಸಮಗ್ರ ಕೃತಿಗಳನ್ನು (ಭಾಗ-೧) ಸಂಪಾದಿಸಿರುವ ಡಾ|| ಎಸ್. ವಿದ್ಯಾಶಂಕರ ಅವರು –

"ಮುಮುಕ್ಷು ಮೊದಲು ಪಾರಮಾರ್ಥದ ಪ್ರಕಾಶ ತಿಳಿಯಬೇಕು. ಅದಕ್ಕೆ 'ವಿವೇಕ ಚಿಂತಾಮಣಿ'ಬೇಕು; ಅನುಭವಸಾರ'ವನ್ನು ಅರಗಿಸಿಕೊಂಡ ಜ್ಞಾನಿಯು 'ಪರಮಾರ್ಥಗೀತೆ'ಯನ್ನು ಹಾಡುತ್ತಾ 'ಕೈವಲ್ಯ ಪದ್ಧತಿ'ಯನ್ನು ಅರುಹಬೇಕು ಎಂಬ ಭಾವವು ಮೂಡುವಂತಿದೆ ಈ ಕೃತಿಗಳ ಕ್ರಮ" ಎಂದು ಹೇಳಿದ್ದಾರೆ.

*(ಮುಂದುವರೆಯುತ್ತದೆ)*

# ಗಣಪತಿ



ಗಣಪತಿ ಗಣಪತಿ ಓಂ ಭಜೆ ವಿಘ್ನನಿವಾರಕ
ತವ ಚರಣಾಂಬುಜಕೆ ಶರಣು ಶರಣು || ಪ ||

ಭಕುತರ ಹೃದಯದಿ ನೆಲೆಸಿಹೆ ನೀನು
ಅಧಿಪತಿ ನೀನೆ ವಿದ್ಯಾಪ್ರದಾಯಕ ನೀನೆ
ಮನವೂ ನೀನೇ ಮಾತೂ ನೀನೆ
ಸಕಲ ಕಾರ್ಯ ಸಂಪದಕೆ ಕಾರಣನೂ ನೀನೆ || ಪ ||

ಒಳಗೂ ಹೊರಗೂ ಬೆಳಕೂ ನೀನೆ
ಬೆಳಕಿನೊಳಗಣ ಬೆಳಗು ಬದುಕೂ ನೀನೆ
ಧರ್ಮಭೇದವು ಇಲ್ಲ ಜಾತಿಭೇದವು ಇಲ್ಲ
ಎಲ್ಲರಿಗೂ ಹರುಷದಿ ದರುಶನ ನೀಡುವ
ಮಹಾಮಹಿಮನು ನೀನೆ || ಪ ||

ತಂದೆ ತಾಯಿ ಬಂಧು ಬಳಗ ಎಲ್ಲವೂ ನೀನೆ
ಸ್ಮರಣೆ ನೀನೆ ಮರೆವು ನೀನೆ
ಸಕಲ ಜೀವದ ಚೈತನ್ಯವೂ ನೀನೆ
ಭಕ್ತಕೋಟಿಯ ಬದುಕಿಗೆ ದಾರಿದೀಪವೂ ನೀನೆ
ಎಲ್ಲರನ್ನು ಪೊರೆಯೋ
ದಯಾಮಹಿಮ ಗಣಪತಿಯೆ || ಪ ||

– ಪಿ.ಬಿ. ರುದ್ರೇಶಯ್ಯ
ಕನ್ನಡ ಶಿಕ್ಷಕರು
ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ
ಹಿರೇಹಳ್ಳಿ, ತುಮಕೂರು ತಾ & ಜಿಲ್ಲೆ

# ಪರತತ್ತ್ವ ಸುಖಿ - ಅಗ್ಘವಣಿ ಹಂಪಯ್ಯ

- ಪ್ರೊ ಶಂಕರಗೌಡ ಮ. ಬಿರಾದಾರ (ಗುಂಡಕನಾಳ) *

**ಕಾ**ರ್ಯ ಕಾಯಕವಾಗಿ ಕಾಯದ ಪರಿಶುದ್ಧತೆಯಲ್ಲಿ ಕಾಯಕ ಕೈಲಾಸವಾದುದು ಧರ್ಮಪ್ರವಾದಿ ಬಸವಣ್ಣನವರ ಕಾಲದಲ್ಲಿ. ಆದ್ದರಿಂದ ಬಹುತೇಕ ಶರಣ-ಶರಣೆಯರನ್ನು ಅವರವರ ಕಾಯಕದ ಹೆಸರಿನ ಉಪಮೇಯದೊಂದಿಗೆ ಅವರ ಅಂಕಿತ ಹೆಸರನ್ನು ಸೇರಿಸಿ ಕರೆಯಲಾಗಿದೆ. ಕಾಯಕ ಮಹತಿಯ ಈ ಸಂಪ್ರದಾಯ ಬಸವಾದಿ ಶರಣರ ಕಾಲದಲ್ಲಿಯೇ ವಿಶ್ವಗುರು ಬಸವಣ್ಣನವರಿಂದಲೇ ಪ್ರಾರಂಭವಾಗಿ, ಹೆಚ್ಚು ಪ್ರಚಲಿತವಾಗಿರುವುದು ಕಂಡುಬರುತ್ತದೆ. ಆದ್ದರಿಂದ 'ಅಗ್ಘವಣಿಯ ಹಂಪಯ್ಯ' ಶರಣ ಕೂಡ ಬಸವಾದಿ ಶರಣರ ಸಮಕಾಲೀನ (ಹನ್ನೆರಡನೆಯ ಶತಮಾನ) ನೆನ್ನಬಹುದು.

ಶಿವಶರಣರ ಕಥಾರತ್ನಕೋಶದಲ್ಲಿ ಇವನು ಮುಕ್ಕುಂದಪುರದ ನಿವಾಸಿಯೆಂದು ಉಲ್ಲೇಖಿತವಾಗಿರುವುದು. ಇವನ ಆರಾಧ್ಯದೈವ ಹಂಪೆಯ ವಿರೂಪಾಕ್ಷದೇವ. ಇವನು ವಿರೂಪಾಕ್ಷದೇವರ ಪರಮಭಕ್ತನಾಗಿದ್ದನೆಂಬುದು ಇವನ ಅಂಕಿತನಾಮ ಮತ್ತು ವಚನಾಂಕಿತದಿಂದ ತಿಳಿದುಬರುತ್ತದೆ. ಇವನ ವಚನಾಂಕಿತ 'ಹಂಪೆಯ ವಿರುಪನ ತೋರುವ ಗುರು ಪಂಚಾಕ್ಷರಿ' ಎಂದಿರುವುದರಿಂದ ತನ್ನ ಆರಾಧ್ಯದೈವ ಮತ್ತು ಗುರುವಾದ ಪಂಚಾಕ್ಷರಿಯನ್ನು ಒಟ್ಟಾಗಿಯೇ ನೆನೆದಿರುವುದು ಸ್ಪಷ್ಟವಾಗುತ್ತದೆ. 'ನಮಃ ಶಿವಾಯ' ಎಂಬ ಪಂಚಾಕ್ಷರ ಮಂತ್ರ ನಿಷ್ಪತ್ತಿಯ ಭಕ್ತಿಯಲ್ಲಿ ವಿರೂಪಾಕ್ಷನನ್ನರಿಯಲು ಸಾಧ್ಯವೆಂಬ ಶ್ಲೇಷಾರ್ಥವೂ ಇವನ ವಚನಾಂಕಿತದಲ್ಲುಂಟು. ಆದರೆ ಆ ಶರಣನವು ಕೇವಲ ನಾಲ್ಕೇ ನಾಲ್ಕು ವಚನಗಳು ಮಾತ್ರ ಉಪಲಬ್ಧವಾಗಿವೆ. ಇವನ ವಚನಗಳಲ್ಲಿ ಸೂಕ್ಷ್ಮವಾದ ಬೆಡಗು, ಆಳವಾದ ಪರತತ್ತ್ವ ಪ್ರತಿಪಾದನೆ ಕಂಡುಬರುತ್ತದೆ. ಇದರಿಂದ ಅಗ್ಘವಣಿಯ ಹಂಪಯ್ಯ ಪರತತ್ತ್ವದ ಸುಖದಲ್ಲಿ ನಿತ್ಯಾನಂದ ಸುಖಿಯಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

ಸಿದ್ಧನಂಜೇಶನ 'ಗುರುರಾಜ ಚರಿತ್ರೆ', ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ', ಲಕ್ಕಣ ದಂಡೇಶನ 'ಶಿವತತ್ತ್ವ ಚಿಂತಾಮಣಿ' ಸಕಲ ಪುರಾತನರ ವಚನಗಳು ಮುಂತಾದ ವೀರಶೈವ ಕಾವ್ಯಗಳಲ್ಲಿ ಈ ಶರಣನ ಹೆಸರು ಉಲ್ಲೇಖವಾಗಿರುವುದರಿಂದ ಇವನೂ ಒಬ್ಬ ಬಸವಾದಿ ಶರಣರಲ್ಲಿ ಕಾಯಕ ಮತ್ತು ಪರತತ್ತ್ವ ನಿಷ್ಠನಾಗಿದ್ದನೆಂಬುದು ಕಂಡುಬರುತ್ತದೆ.

ಬಸವಣ್ಣನವರ ಮಾನವೀಯ ಕಲ್ಯಾಣದ ಸಮಾನತೆಯ ಸಮತಾಧರ್ಮದ ಮತ್ತು ಕಾಯ-ಕಾಯಗಳೆರಡು ಕೈಲಾಸವಾಗಿಸಿಕೊಳ್ಳುವ ಅವರವರ ಕಲ್ಯಾಣದ ಕಮ್ಮಟದ ಮಹತಿ ಜಂಗಮರಿಂದ ಎಲ್ಲೆಡೆ ಪಸರಿಸಿದಂತೆ ಅಗ್ಘವಣಿಯ ಹಂಪಯ್ಯನಿರುವ ಮುಕ್ಕುಂದ ಗ್ರಾಮದವರೆಗೂ ಪಸರಿಸಿರಲಿಕ್ಕೆ ಸಾಕು. ಬಸವಾದಿ ಶರಣರ ಸತ್ಸಂಗದಲ್ಲಿ ತಮ್ಮ ತಮ್ಮ ನಿಜರೂಪವನ್ನರಿತು ನಿತ್ಯಾನಂದ ಸುಖದಲ್ಲಿ ಸುಖಿಸಲು ಬಸವಕಲ್ಯಾಣಕ್ಕೆ ಆಗಮಿಸಿದ ಶರಣರಲ್ಲಿ ಇವರೂ ಒಬ್ಬರೆನ್ನಬಹುದು. ಬಸವಾದಿ ಶರಣರ ಅನುಭಾವದ ಸತ್ಸಂಗದಲ್ಲಿ ಪರತತ್ತ್ವದ ಸಂಸ್ಕಾರಗೊಂಡು ಪರಿಪಕ್ವತ್ವವಾಗಿ, ತಮ್ಮ ಸ್ವಾನುಭವದಿಂದ ವಚನಗಳನ್ನು ರಚಿಸಿರಬಹುದು.

ಇನ್ನು ಇವರ ಕಾಯಕದ ನಿಷ್ಠೆಯೂ ಅಷ್ಟೇ ಘನತರವಾದುದು. ಈ ಶರಣ ಶಿವಭಕ್ತರ ಮನೆಗೆ ಅಗ್ಘವಣಿ (ನೀರು) ಪೂರೈಸುವ ಕಾಯಕವನ್ನು ಕೈಗೊಂಡಿದ್ದನ್ನು. ಶರಣರ ಪ್ರಸಾದ, ಪೂಜೆಗೆ ಅಡೆತಡೆಯುಂಟಾಗದಂತೆ ವೇಳೆಗೆ ಸರಿಯಾಗಿ ಭಕ್ತಿನಿಷ್ಠೆಯಿಂದ ನೀರು ಪೂರೈಸುತ್ತಿದ್ದರಂತೆ. ಈ ಕಾಯಕದಿಂದ ಬಂದ ಆದಾಯದಿಂದ ನಿತ್ಯ ದಾಸೋಹಗೈವ ವ್ರತನಿಷ್ಠನಾಗಿದ್ದನು. ಒಂದು ಸಲ ಮಳೆಯ ಅಭಾವದಿಂದ ನೀರು ದೊರೆಯದಿರಲು ತನ್ನ ಮನೆಯಲ್ಲಿಯ ಪಾತ್ರೆ ಪಗಡಿಗಳನ್ನೇ ಮಾರಿ ಒಂದು ಚಿಲುಮೆ ತೋಡಿಸಿದನಂತೆ. ಅಲ್ಲಿಯೂ ನೀರಿನ ಸೆಲೆ ಕಾಣದಿರಲು, ತನ್ನ ಕಾಯಕ ಮತ್ತು ದಾಸೋಹಕ್ಕೆ ಆಪತ್ತು ಬರುವ ಲಕ್ಷಣ ಕಂಡು, ಎತ್ತರದ ಬೆಟ್ಟದಿಂದಲೇ ಅಗ್ಘವಣಿಯನ್ನು ತಂದು ಕಾಯಕ ಮತ್ತು ದಾಸೋಹನಿಷ್ಠೆ ಮೆರೆದ ಪ್ರತೀತಿ ಈ ಶರಣನದಾಗಿದೆ. ಇವನ ಕಾಯಕಭಕ್ತಿ, ಪರತತ್ತ್ವ ಪ್ರತಿಭೆ ಇವನ ವಚನಗಳಲ್ಲಿ ಸ್ಪಷ್ಟಗೊಂಡಿರುವುದುಂಟು.

* ನಿವೃತ್ತ ಉಪನ್ಯಾಸಕರು, ಚಿಕ್ಕತೊಟ್ಲುಕೆರೆ, ಕೋರಾ ಹೋಬಳಿ, ತುಮಕೂರು ತಾ/ಜಿಲ್ಲೆ

## ಅಗ್ಘವಣಿ ಹಂಪಯ್ಯನ ವಚನಗಳು ಮತ್ತು ತಾತ್ಪರ್ಯ

### ೧. 'ಕರೆವ ಕಾಮಧೇನು'

*"ಭಕ್ತ್ಯಾನಂದವನದಲ್ಲಿ ಜ್ಞಾನಾಂಕುರವ ಮೆಲಿದು*
*ಆನಂದವೆಂಬ ಜಲವನೀಂಟಿ*
*ಸಮತೆಯೆಂಬ ನೆಳಲಲ್ಲಿರ್ಪುದ ನೆನೆಯಾ ಮನವೆ !*
*ಮಹಾಮಂತ್ರ ಶಿವಧ್ಯಾನವನೆ ಸವಿದು,*
*ಮೆಲುಕುತಿರ್ಪುದು*
*ಧರ್ಮಾರ್ಥಕಾಮಮೋಕ್ಷವೆಂಬ ಮೊಲೆ ತೊರೆಯಲು*
*ಹಂಪೆಯ ವಿರುಪನ ಕರೆವ ಕಾಮಧೇನು*
*ಪಂಚಾಕ್ಷರಿಯೆಂಬುದು"*

**ತಾತ್ಪರ್ಯ**

ಈ ವಚನದಲ್ಲಿ ಶ್ರೀಗುರುವಿನನುಗ್ರಹದಿಂದ ಏನೆಲ್ಲವು ಸಾಧಿಸುವುದೆಂಬುದನ್ನು ಅಗ್ಘವಣಿಯ ಹಂಪಯ್ಯ ಶರಣ ಪ್ರಸ್ತುತಪಡಿಸುವುದರೊಂದಿಗೆ ಗುರುವೆಂದರೆ ಸದಾ ಹಾಲನ್ನು ಕರೆಯುವ, ಬೇಡಿದಾಗ ಬೇಡಿದ್ದನ್ನು ಕೊಡುವ ಕಾಮಧೇನುವಿದ್ದಂತೆಯೆಂದು ಗುರುವಿನ ಮಹತಿಯನ್ನು ವ್ಯಕ್ತಪಡಿಸಿರುವುದುಂಟು.

ಶ್ರೀಗುರುವಿನ ಮಾರ್ಗದರ್ಶನದಲ್ಲಿ ನಿಷ್ಕಾಮ ಭಕ್ತಿಯಿಂದ ಸಾಧನೆಗೈದು ತಾನಾರೆಂಬ ತನ್ನ ನಿಜದರಿವಿನಲ್ಲಿ ಬೆರೆತು, ನಿಜಾನಂದದ ನಿರ್ಮಲ ನೀರನ್ನು ಕುಡಿದು, ಬಾಹ್ಯದ ವ್ಯವಹಾರದಲ್ಲಿ ಮತ್ತು ಅಂತರಂಗದ ಆತ್ಮಾನುಭವದ ಸಾಧನೆಯ ವ್ಯವಹಾರದಲ್ಲಿ ಸಮತೆಯನ್ನು ಸಾಧಿಸಿ, ಎರಡಳಿದು ಒಂದಾಗಿ, ಆ ಒಂದರಲ್ಲಿ ತಾನೇ ತಾನಾಗಿರುವುದನ್ನು ಸಾಧಿಸಿಕೋಯೆಂದು ಮನಕ್ಕೆ ಮನವರಿಕೆ ಮಾಡಿಕೊಟ್ಟಿದ್ದಾನೆ. ಈ ಪರತತ್ತ್ವ ಸ್ಥಿರತೆಯಲ್ಲಿ ಯಾವಾಗಲೂ ಮನದಲ್ಲಿ ಮಹಾಮಂತ್ರದ (ಓಂ ನಮಃ ಶಿವಾಯ) ಮನನವನ್ನು ತುಂಬಿಕೊಂಡು ಶಿವಧ್ಯಾನದ (ನಿಜಸ್ವರೂಪದ) ನಿಜಾನಂದದ ಸವಿಯನ್ನು ಸವಿಯುತ್ತಾ ಅಂದರೆ, ನಿಜಾನಂದದ ಸುಖವನ್ನು ಸುಖಿಸುತ್ತಿರಬೇಕು. ಆಗ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಮೊಲೆಗಳಲ್ಲಿ ಅಂದರೆ, ನಾಲ್ಕು ಸ್ಥಿತಿಯಲ್ಲಿ ಪರಿಪಕ್ವಿಯಾಗುವೆ, ಆತ್ಮಾನುಭವ ತುಂಬಿ ಹರಿಯುವುದು. ಹೀಗೆ ತಾನಾರೆಂದು ತನ್ನ ನಿಜವನರಿತು, ನಿಜಾನಂದದಲ್ಲಿ ನಿತ್ಯಸುಖಿಯಾಗಬೇಕಾದರೆ ಪರತತ್ತ್ವದ ಆಗರವಾದ ಶ್ರೀಗುರುವೇ ಅದಕ್ಕೆ ಕಾಮಧೇನುವಿದ್ದಂತೆ. ಹೀಗೆ ಗುರುವಿನನುಗ್ರಹದಿಂದ ಭಕ್ತಿ ಸಾಧನೆಗೈದು ಮನವನ್ನು ನಿಲ್ಲಿಸಿ ನಿಜವನರಿತು ಪರವಸ್ತುವಿನಲ್ಲಿ ಪರಮನಾಗೆಂಬುದೇ ಈ ವಚನದ ತಾತ್ಪರ್ಯವಾಗಿದೆ.

### ೨. 'ಗುರುವೇ ಸರ್ವಕ್ಕೂ ಮೇಲು'

*"ವಿಪುಳ ವೇದ ವೇದಾಂತಸಾರ,*
*ಸಕಲಲೋಕಜನಹಿತಾಧಾರ*
*ಸಪ್ತಕೋಟಿ ಮಹಾಮಂತ್ರಗಳ ತವರುಮನೆ,*
*ಭಕ್ತಜನ ಜೀವಾನಂದ*
*ಅಖಿಳಾಗಮ ಸಂತಾನದ ಹರಣ,*
*ಮುಕ್ತಿಗೆ ಕಾರಣ ಸೋಪಾನ*
*ಪ್ರಣವಾಂಕುರ ಪಲ್ಲವ ಫಲರೂಪು,*
*ತ್ರಿಣಯನೊಲಿಸುವ ಕರ್ಣಾಭರಣ*
*ಹರನನಾಮದ ಸಾಕಾರದ ನಿಲುವು,*
*ಪರಮ ಪಂಚಬ್ರಹ್ಮಾನಂದ*
*ಪರತತ್ತ್ವದ ನಿತ್ಯದ ನೆಲೆ*
*ಹಂಪೆಯ ವಿರುಪನ ತೋರುವ ಗುರು ಪಂಚಾಕ್ಷರಿ"*

**ತಾತ್ಪರ್ಯ**

'ಗುರು' ಈ ಪದ ಪರವಸ್ತುವೇ ಆಗಿದೆ. ಈ ಪದದ ಕ್ರಿಯಾಶೀಲತೆಯನ್ನು ಬಣ್ಣಿಸಲಸದಳವಾದುದು. ವಿಶ್ವದ ಗುರುತ್ವಾಕರ್ಷಣ ಶಕ್ತಿ ಇದರಲ್ಲಿ ಅಡಕವಾಗಿದೆ. ಆದ್ದರಿಂದ ಇದು ವಿಶ್ವಾತೀತವಾದುದು, ಗುರುತರವಾದುದು, ಗುರುಪದದಷ್ಟು ದೊಡ್ಡದು, ವಿಶ್ವಾತೀತವಾದುದು. ಸರ್ವಲೀಲಾಮಯವಾದುದೆಂದರೆ ಇದುವೆ. ಇದಕ್ಕೆ ಮತ್ತೊಂದು ಸರಿಸಾಟಿಯಿಲ್ಲ. ಆದ್ದರಿಂದಲೇ ಪರತತ್ತ್ವ ಸುಖಿಯಾದ ಸ್ವಾನುಭವಿ ಅಗ್ಘವಣಿ ಕಾಯಕದ ಹಂಪಯ್ಯ ಶರಣ ಗುರುವಿನ ಮಹತಿಯನ್ನು ಈ ಪ್ರಸ್ತುತ ವಚನದಲ್ಲಿ ಹೀಗೆ ಅರ್ಥೈಸಿದ್ದಾನೆ.

ಗುರುವೆಂದರೆ ಎಲ್ಲ ವೇದ ವೇದಾಂತಗಳ ಸಾರದೊಡೆಯ, ಸಕಲ ಲೋಕದ ಜನರ ಅರಿವಿನಾಗರದ ಹಿತಕ್ಕೆ, ಪ್ರಪಂಚದ ಅರಿವಿಗೆ, ಪಾರಮಾರ್ಥದರಿವಿಗೆ ಆಧಾರವಾದವನು. ಸಪ್ತಕೋಟಿ ಮಹಾಮಂತ್ರಗಳೆಲ್ಲವಕ್ಕೂ ಗುರುವೇ ಆಧಾರ. ಭಕ್ತರು ತಮ್ಮನ್ನು ತಾವರಿತು ನಿಜಾನಂದವನ್ನು ಅನುಭವಿಸುವ ಆನಂದಕ್ಕಾಧಾರನು.

ಭಕ್ತರನ್ನು ಭಕ್ತಿಮಾರ್ಗದಲ್ಲಿ, ಧರ್ಮಮಾರ್ಗದಲ್ಲಿ ನಡೆಸಿಕೊಂಡು ಹೋಗುವ ಅವರ ಜೀವದ ಜೀವಾನಂದ ಅಲ್ಲ. ಆಗಮಗಳಲ್ಲಿಯ ಶಬ್ದ-ತರ್ಕ, ವಾದ-ವಿವಾದ, ಸಂಶಯಗಳ ನಿವಾರಕ, ನಿತ್ಯ ಸತ್ಯ ಪ್ರತಿಪಾದಕ, ನಿತ್ಯಮುಕ್ತಿಗೆ ಕಾರಣಕರ್ತ. ಪ್ರಣವಾಕ್ಷರದ (ಓಂ ಅಕ್ಷರದ) ಮೂಲಕ್ಕೂ ಅದರ ಉತ್ಪತ್ತಿ, ಸ್ಥಿತಿ, ಲಯ, ಕ್ರಿಯಾಶೀಲತೆಯ ಫಲಕ್ಕೂ ಮೂಲ ಕಾರಣನು. ಮುಕ್ಕಣ್ಣನನ್ನರಿಯುವ ಅಂದರೆ ತನ್ನಲ್ಲಿ ತಾ ನಿಜಾತ್ಮದಲ್ಲಿ ಪರವಸ್ತುವಿನ ಸ್ವರೂಪವನ್ನರಿತು, ಪರದಲ್ಲಿ ಪರವಾಗುವ (ಬೆರೆತು ಒಂದಾಗುವ) ಪರತತ್ತ್ವಾಭರಿತಕ್ಕೆ ಪರಿಪೂರ್ಣಭರಿತನಾದವನು ಗುರು. ನಿರಾಕಾರನಾದ ಪರಶಿವನ ಸಾಕಾರ ರೂಪವೇ ಗುರು. ("ಹರನೇ ತನುಸ್ಥಲಕ್ಕೆ ಗುರುವಾಗಿ, ಮನಸ್ಥಲಕ್ಕೆ ಲಿಂಗವಾಗಿ, ಪ್ರಾಣಸ್ಥಲಕ್ಕೆ ಜಂಗಮನಾಗಿ" ಬಂದನೆಂದು ಶರಣರು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು) ಪಂಚ ಜ್ಞಾನೇಂದ್ರಿಯಗಳು ಪರತತ್ತ್ವದ ಪರಿಪಕ್ವತೆಯಲ್ಲಿ ಪರಮಾನಂದ ಸುಖಭರಿತವಾದ ಪರಮಪಂಚ ಬ್ರಹ್ಮಾನಂದವೇ ಗುರು. ಪರತತ್ತ್ವದ ನಿತ್ಯದ ನಿಜದ ನಿಲುವೇ ಗುರು. ನಿಷ್ಕಾಮ ಭಕ್ತಿಯ ಸರ್ವ ಸಾಧಕರಲ್ಲಿ ಅವರವರ ನಿತ್ಯ ನಿಜರೂಪವನ್ನರುಹಿ, ಆತ್ಮದರ್ಶನ ಮಾಡಿಸಿ, ಮಹದಲ್ಲಿ ಮಹವಾಗಿಸಿ ಪ್ರಕಾಶಿಸುವವನೇ ಗುರು. ಗುರುವೇ ಸರ್ವಕ್ಕೂ ಮೇಲು ಎಂಬ ಗುರು ಮಹತಿಯನ್ನು ಈ ವಚನದಲ್ಲಿ ಮೆರೆಯಲಾಗಿದೆ.

### ೩. 'ಭಕ್ತರೆಂಬುವರಿನ್ನು ಬದುಕಲೇಬಾರದು'

*"ಹಂಸಪತಿ ಗರುಡಪತಿ ವೃಷಭಪತಿ*
*ಮೊದಲಾದ ಸರ್ವ ಜೀವಾಧಿಪತಿ*
*ದೇವರಾಯ ಮಹಾರಾಯನ ಅರಸುತನ ಹೊಸತು*
*ಓಲಗಕ್ಕೆ ಬಾರ, ಸಿಂಹಾಸನದಲ್ಲಿ ಕುಳ್ಳಿರ,*
*ಸ್ತ್ರೀಲಂಪಟನಾಗಿ ಅಂತಃಪುರವ ಬಿಟ್ಟು ಹೊರವಂಡ*
*ಕಪ್ಪ ಕಾಣಿಕೆಯನೊಪ್ಪಿಸಿಕೊಂಬವರಿಲ್ಲ*
*ಗುರುವೆಂಬ ತಳವಾರನ ಆಜ್ಞೆ ಕೆಟ್ಟಿತ್ತು*
*ತೆರೆದ ಬಾಗಿಲ ಮುಚ್ಚುವರಿಲ್ಲ*
*ಮುಚ್ಚಿದ ಬಾಗಿಲ ತೆರೆವವರಿಲ್ಲ*
*ಹಂಪೆಯ ವಿರುಪಯ್ಯನ ಅರಸುತನ ಕೆಟ್ಟಿತ್ತು*
*ಭಕ್ತರೆಂಬುವರಿನ್ನು ಬದುಕಲೇಬಾರದು"*

**ತಾತ್ಪರ್ಯ**

ಈ ಪ್ರಸ್ತುತ ವಚನವು ಲೋಕದ ಬಾಹ್ಯಾಡಂಬರ ಧರ್ಮಾಚರಣೆಯನ್ನು ವಿಡಂಬಿಸುವುದಾಗಿದೆ. ಈ ಮರ್ತ್ಯಲೋಕದ ಜನ ತಮತಮಗೆ ಸುಖಿಸಬೇಕಾದ ಬಾಹ್ಯದ ಸುಖಾನುಭವದ ಇಷ್ಟಾರ್ಥಗಳನ್ನು ದೇವರುಗಳಿಗೆ ಕಲ್ಪಿಸಿ, ದೇವರುಗಳ ದೃಷ್ಟಾಂತದಲ್ಲಿ ತಾವು ಸರ್ವ ಇಷ್ಟಾರ್ಥಗಳನ್ನು ಉಪಭೋಗಿಸುವ ಅಜ್ಞತೆಯನ್ನು, ಮಮಕಾರತ್ವವನ್ನು, ಬಹುದೇವರುಗಳ ಸೃಷ್ಟಿ-ಆರಾಧನೆಯನ್ನು, ಅಷ್ಟವಿಧಾರ್ಚನೆಯನ್ನು ಕಂಡ ಅಗ್ಘವಣಿ ಹಂಪಯ್ಯ ಶರಣ ಈ ವಚನದಲ್ಲಿ ವ್ಯಂಗ್ಯವಾಡಿದ್ದಾನೆ.

ಬ್ರಹ್ಮ, ವಿಷ್ಣು, ಶಿವರಿಗೆ-ಸರಸ್ವತಿ, ಲಕ್ಷ್ಮೀ, ಪಾರ್ವತಿ ಹೆಂಡಂದಿರನ್ನು ಜೋಡಿಸಿ ಪುರಾಣಗಳನ್ನು ಬರೆದು ಅವರನ್ನು ಹೆಂಡಂದಿರ ಮೋಹದಲ್ಲಿ ಕೆಡವಿ, ಪರಿತಪಿಸುವಂತೆ ಮಾಡಿದ್ದಾರೆ. ಅದರಂತೆ ಇಂದ್ರ, ಚಂದ್ರ, ವಾಯು, ವರುಣ, ಕುಬೇರ ಇತ್ಯಾದಿ ಜೀವಾಧಿಪತಿಗಳನ್ನು ಸೃಷ್ಟಿಸಿ ಅವರನ್ನೂ ಪ್ರಪಂಚದ ಮೋಹದಲ್ಲಿ ಲೋಕದ ಜನ ಕೆಡವಿದ್ದಾರೆ. ವಿಶ್ವಾತೀತನಾದ ನಾಮ-ರೂಪ-ಶಬ್ದಾತೀತನಾದ ಆ ಮಹಾಪರವಸ್ತುವನ್ನು (ಪರಶಿವನನ್ನು) ಅರಿಯದೆ, ತಮ್ಮ ತಮ್ಮ ನಿಜಸ್ವರೂಪವನ್ನು, ನಿತ್ಯ ಸತ್ಯವನ್ನು ಅರಿಯದೆ ಬಾಹ್ಯದ ಬಂಧನಕ್ಕೆ ಜನ ತಾವೂ ಒಳಗಾಗಿದ್ದಾರೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಆಯಾ ದೇವರುಗಳನ್ನೂ ಲೌಕಿಕ ಬಂಧನಗಳಲ್ಲಿ ಸಿಲುಕಿಸಿದ್ದಾರೆ. ಇವರ ಕಲ್ಪಿತ ದೇವರುಗಳೆ ಮಮಕಾರದಿಂದ ಮುಕ್ತರಾಗಿಲ್ಲವೆಂದ ಮೇಲೆ ಆ ದೇವರುಗಳನ್ನು ಬಾಹ್ಯ ವಸ್ತುಗಳಿಂದ ಆರಾಧಿಸುವ ಈ ಭವದ ಭವಿಗಳೆಂದು ಮುಕ್ತಿ ಪಡೆದಾರು ? ಎಂಬ ಪ್ರಶ್ನೆಯೇ ಹಂಪಯ್ಯ ಶರಣನದಾಗಿದೆ.

ತಮ್ಮ ತಮ್ಮ ಅಧಿಕಾರ, ಪ್ರತಿಷ್ಠತೆ, ಹೆಂಡಂದಿರ ವ್ಯಾಮೋಹದಲ್ಲಿ ಸಿಲುಕಿದ ಈ ದೇವರುಗಳು ನಿತ್ಯ ನಿಜ ಧರ್ಮದ ಓಲಗಕ್ಕೆ ಬರಲಾರರು. ಪರತತ್ತ್ವದ ಸಿಂಹಾಸನದ ಮೇಲೆ ಕುಳಿತುಕೊಳ್ಳಲಾರರು. ಸ್ತ್ರೀಲಂಪಟತೆಯಲ್ಲಿ ಮುಳುಗಿ ಅಂತಃಪುರ ಬಿಟ್ಟು ಹೊರಬರಲಾರರು. ನಿಜವಾದ ಭಕ್ತರ ಭಕ್ತಿಯನ್ನು ಸ್ವೀಕರಿಸುವವರಿಲ್ಲ. ಇಂಥ ದೇವರ ಹೆಸರಿನಲ್ಲಿ ಪ್ರಾಣಿಬಲಿ, ದೇವದಾಸಿಯರನ್ನು ಬಿಡುವುದು, ಬಾಹ್ಯ ವಸ್ತುಗಳನ್ನು ಅರ್ಪಿಸುವುದು, ಸಲ್ಲದ ವ್ರತ-ನಿಯಮಗಳನ್ನು ಮಾಡುತ್ತ ಕ್ಷಣಿಕ ಸುಖಾಸಕ್ತರಾದ ಭಕ್ತರು ಈ ಅಜ್ಞತೆಯಿಂದ ಹೊರಬರಲಾರದಷ್ಟು ವಿಷಯಾಸಕ್ತರಾಗಿದ್ದಾರೆ. ಇಂಥವರಿಗೆ ನಿಜಗುರುವಿನ ನಿತ್ಯದರಿವಿನ ನುಡಿಗಳು ನಾಟಕವು. ಅಜ್ಞಾನದ ಆಶೆ-ಆಮಿಷಗಳ ದುರಾಶೆಯ ಬಾಗಿಲನ್ನು ಮುಚ್ಚುವ ಗುರುಗಳಿಲ್ಲ, ಅರ್ಚಕರಿಲ್ಲ, ಧರ್ಮಗಳಿಲ್ಲ, ಎಲ್ಲರೂ ಅವರೆ, ಅಂದಮೇಲೆ ನಾನಾರೆಂಬ ನಿಜದರಿವಿನ ಮುಚ್ಚಿದ ಬಾಗಿಲನ್ನು ಯಾರು ತೆರೆಯಬಲ್ಲರು ? ಯಾರೂ ಅಂಥ ಪರತತ್ತ್ವ





ಪರಿಪಕ್ವಿಗಳಲ್ಲ. ಲೋಕವೇ ಬಾಹ್ಯ ಸುಖ ಲೋಲುಪ್ತವಾಗಿದೆ. ಹೀಗಾಗಿ ಆ ಪರಮ ಪರವಸ್ತುವಾದ ಪರಶಿವನ ಪರಮತೆ, ಪರಂಜ್ಯೋತಿ ಪ್ರಕಾಶ, ಮಹಂತತೆಯನ್ನು ಅರಿಸುವವರು, ಅರಿಯುವವರಿಲ್ಲದೆ ನಿತ್ಯ ನಿಜಧರ್ಮ ಹಾಳಾಗಹತ್ತಿದೆ. ಅಂದರೆ ಅರಿಯದೆ ಮರೆಯಾಗಿದೆ. ಇಂಥ ಧರ್ಮದೂಷಿತ ಪರಿಸರದಲ್ಲಿ ನಿಜವಾದ ಭಕ್ತನಿಗೆ ಮಾರ್ಗ ತೋರುವವರಾರು ? ಅವನು ಭಕ್ತಿ ಮಾಡುವುದೆಂತು ? ನಿತ್ಯ ನಿಜ ಭಕ್ತರ ಕಾಲವಿದಲ್ಲವೆಂದು ಅಗ್ಘವಣಿ ಹಂಪಯ್ಯ ಶರಣ ಮಮ್ಮಲ ಮರುಗಿದ್ದಾನೆ.

### ೪. 'ನಿಜಭಕ್ತನ ಘನಘನ ಮಹಿಮೆ'

*"ಹುಸಿಯ ನುಡಿಯನು ಭಕ್ತ, ವ್ಯಸನಕ್ಕೆಳಸನು ಭಕ್ತ*
*ವಿಷಯಂಗಳಾತಂಗೆ ತೃಣವು ನೋಡಾ, ಬಯಸುವವನಲ್ಲ*
*ಭಕ್ತ*
*ದಯೆಯೆಂಬುದು ತನ್ನ ಕೈಯಲ್ಲಿ,*
*ಸ್ಮರಣೆಯೆಂಬುದು ತನಗೆ ತೊತ್ತಾಗಿಪ್ಪುದು*
*ಕೋಪವೆಂಥದೆಂದರಿಯ, ತಾಪತ್ರಯಂಗಳು*
*ಮುಟ್ಟಲಮ್ಮವು, ವ್ಯಾಪ್ತಿಗಳಡಗಿದವು*
*ಲಿಂಗವನೊಳಗೊಂಡ ಪರಿಣಾಮಿ*
*ಆತನ ಪಥ ಲೋಕಕ್ಕೆ ಹೊಸತು,*
*ಲೋಕದ ಪಥವಾತನಿಗೆ ಹೊಸತು*
*ತನಗೊಮ್ಮೆಯು ಲಿಂಗಧ್ಯಾನ,*
*ಲಿಂಗಕ್ಕೊಮ್ಮೆಯು ತನ್ನ ಧ್ಯಾನ*
*ಘನ ಘನ ಮಹಿಮೆಯ ಹೊಗಳಲೆನ್ನಳವಲ್ಲ*
*ಪನ್ನಗಧರ ಕೇಳಯ್ಯಾ, ಚೆನ್ನ ಹಂಪೆಯ ವಿರುಪಯ್ಯಾ*
*ನಿಮ್ಮ ನಂಬಿದ ಸತ್ಯ ಶರಣ ಪರಿಣಾಮಿ"*

**ತಾತ್ಪರ್ಯ**

ಈ ಪ್ರಸ್ತುತ ವಚನದಲ್ಲಿ ನಿತ್ಯ ನಿಜಭಕ್ತನ ನಿಜತ್ವದ ಘನ ಘನತ್ವದ ಸ್ಥಿತಿಯನ್ನು ಅಗ್ಘವಣಿಯ ಹಂಪಯ್ಯ ಶರಣ ಮೆರೆದಿದ್ದಾನೆ. ನಿಜಭಕ್ತನ ನಿಜಸ್ವರೂಪವನ್ನು ಲೋಕದ ಆಡಂಬರದ ಭಕ್ತರಿಗೆ ತಿಳಿಪಡಿಸಿದ್ದಾನೆ. ನಿಜಭಕ್ತನ ಗುಣಗಳ ಮಹತಿಯನ್ನು ತಿಳಿಪಡಿಸುವುದರೊಂದಿಗೆ ಡಾಂಬಿಕ ಭಕ್ತರನ್ನು ಅಪ್ರತ್ಯಕ್ಷವಾಗಿ ವಿಡಂಬಿಸಿರುವುದು ಈ ವಚನದ ಒಳತಿರುಳಾಗಿದೆಯೆಂದರೆ ತಪ್ಪಾಗಲಿಕ್ಕಿಲ್ಲ.

ನಿಷ್ಕಾಮಿಯಾದ, ಸರ್ವಾರ್ಪಣ ಭಾವದ, ಅಹಂದಾಸತ್ವ ಜ್ಞಾನಕ್ರಿಯಾಶೀಲತ್ವದ ನಿತ್ಯನಿಜಭಕ್ತನ ಹುಸಿ ನುಡಿಯನ್ನು, ಯಾವುದೇ ವ್ಯಸನಕ್ಕೆ (ಸ್ತ್ರೀ, ಹಣ, ಭೂಮಿ, ಅಧಿಕಾರ, ಪ್ರತಿಷ್ಠೆ, ಪ್ರಚಾರ ಇತ್ಯಾದಿ) ಒಳಗಾಗಲಾರನು. ರೂಪ, ರಸ, ಗಂಧ, ಶಬ್ದ, ಸ್ಪರ್ಷ ಈ ಪಂಚ ಕರ್ಮೇಂದ್ರಿಯಗಳ ವಿಷಯಂಗಳ ಸುಖ ಆತನಿಗೆ ತೃಣ ಸಮಾನ. ಲೌಕಿಕದ ಯಾವುದೇ ಬಯಕೆಗಳನ್ನು ಬಯಸುವುದಿಲ್ಲ. ಸದಾ ದಯಾಮಯಿಯಾಗಿ, ಪರವಸ್ತುವಿನ ಸ್ಮರಣಾಭರಿತನಾಗಿರುವನು. ಸಹಜೀವರಾಶಿಗಳ ಲೇಸೇ ಅವನ ಸ್ಮರಣೆಯಾಗಿರುವುದು. ತಪ್ಪಿಯೂ ಕೋಪಗೊಳ್ಳಲಾರನು. ಈ ಬಾಹ್ಯ ಪ್ರಪಂಚದ ಅಡಿ-ಆಡಚಣೆಗಳಿಗೆ, ತಾಪತ್ರಯಗಳಿಗೆ, ಬಡತನಕ್ಕೆ ಅಂಜುವವನಲ್ಲ, ಅಳುಕುವವನಲ್ಲ, ಆದ್ದರಿಂದ ಆತ ನಿತ್ಯ ತೃಪ್ತ. ನಿತ್ಯತೃಪ್ತನಾಗಿರುವುದರಿಂದ ಅಂಥ ಭಕ್ತನಿಗೆ ಯಾವುದೇ ತಾಪತ್ರಯಗಳು ಮುಟ್ಟಲಾರವು, ಕಾಡಲಾರವು. ಸರ್ವವ್ಯಾಪಗಳಿಂದ ಮುಕ್ತ. ಸರ್ವವೂ ಲಿಂಗಮಯವಾಗಿರುವುದೆಂಬುದನ್ನರಿತು ಆಚರಿಸುವ ನಿತ್ಯಸುಖಿ. ನಿಜಭಕ್ತನ ಮಾರ್ಗ ಲೋಕದ ಬಾಹ್ಯಾಡಂಬರದ ಭಕ್ತರಿಗೆ ಸರಿಬರದು. ಆದ್ದರಿಂದ ಇವನ ಭಕ್ತಿಪಥ ಲೋಕಕ್ಕೆ ಹೊಸದು, ಆಡಂಬರಗಳ ಭಕ್ತಿ ಈತನಿಗೆ ಹೊಸದು. ಅಂಗವನ್ನೇ ಲಿಂಗವಾಗಿಸಿಕೊಂಡ ಲಿಂಗಾಂಗ ಸಮರಸತೆಯ ಭಕ್ತನೊಳು ಲಿಂಗ, ಲಿಂಗದೊಳು ಭಕ್ತ, ಪರತತ್ತ್ವದೊಂದೇ ಧ್ಯಾನ, ಆಚರಣೆ. ಇಂಥ ನಿಜಭಕ್ತನ ಮಹಾಘನ ಮಹಿಮೆಯನ್ನು ಎಷ್ಟು ಬಣ್ಣಿಸಿದರೂ ಕಡಿಮೆಯೆ. ಆದ್ದರಿಂದ ಅಂಥ ಭಕ್ತನನ್ನು ಹೊಗಳಲು ನನ್ನಿಂದ ಸಾಧ್ಯವಿಲ್ಲವೆಂದು, ಪರವಸ್ತುವನ್ನು ನಂಬಿದ ನಿತ್ಯ ನಿಜಭಕ್ತ ನಿತ್ಯಸುಖಿಯೆಂದು, ನಿಜಭಕ್ತಿಯ ನಿತ್ಯಸುಖಿ ಅಗ್ಘವಣಿಯ ಹಂಪಯ್ಯ ಶರಣ ಭಕ್ತಿಯ ಘನತ್ವವನ್ನು ಇಲ್ಲಿ ಮಹತಿಸಿದ್ದಾನೆ.

ಒಟ್ಟಿನಲ್ಲಿ ಅಗ್ಘವಣಿ ಕಾಯಕದ ಹಂಪಯ್ಯ ಶರಣ ಕಾಯಕನಿಷ್ಠನು, ನಿಜಭಕ್ತನು, ಬಹುದೇವೋಪಾಸನೆಯನ್ನು ನೇರವಾಗಿ ಅಲ್ಲಗಳೆದ ಧೀರ, ಏಕೋದೇವೋಪಾಸನಾ ಬದ್ಧನೂ, ಪರತತ್ತ್ವ ಪರಿಪಕ್ವಿಯೂ ಆಗಿದ್ದನೆಂಬುದು ಅವನು ರಚಿಸಿದ ಮತ್ತು ಉಪಲಬ್ಧವಿದ್ದ ನಾಲ್ಕೇ ನಾಲ್ಕು ವಚನಗಳಿಂದಲೂ ಸ್ಪಷ್ಟವಾಗುತ್ತದೆ.

> **ಕಣ್ಣು ಮೂಗಿಲೆ ನನ್ನ ಹೆಣ್ಣು ಮಗಳು ಚೆಲುವೆ.**
> **ಬಣ್ಣಕ ನನ್ನ ಸೊಸಿ ಚೆಲುವಿ – ದಸರೇಕ**
> **ಬನ್ನಿ ಮುಡಿವಾಗ ಮಗ ಚೆಲವ.**

# ಒಳ್ಳೆಯ ಶರೀರದ ರಚನೆಯನ್ನು ಪಡೆಯುವ ಬಗ್ಗೆ

- ಪ್ರೊ. ಎಚ್. ಗವಿಸಿದ್ಧಯ್ಯ*

ಗಿಡವಾಗಿ ಬಗ್ಗಿಸು; ಮರವಾಗಿ ಬಗ್ಗುವುದು (Bend the twig and bend the tree) ಎನ್ನುವಂತೆ, ಒಳ್ಳೆಯ ಮೈಕಟ್ಟನ್ನು ಹೊಂದಬೇಕಾದರೆ ನಿರಂತರವಾದ ವ್ಯಾಯಾಮ ಅತ್ಯವಶ್ಯಕ. ಅದರಿಂದ ಮಾಂಸ ಖಂಡಗಳ ಬೆಳವಣಿಗೆಯ ಜೊತೆಗೆ ಶರೀರದ ಸಮತೋಲನವನ್ನು ಕಾಪಾಡಿಕೊಳ್ಳಲು ಸಾಧ್ಯ.

ಅಲ್ಲದೆ ಈಜು, ಸೈಕಲ್ ಸವಾರಿ ಮತ್ತು ನೃತ್ಯದಿಂದಲೂ ಅದು ಸಾಧ್ಯ. ಕಷ್ಟದ ದುಡಿಮೆ ಮತ್ತು ಆಟಗಳಲ್ಲಿ ಭಾಗವಹಿಸುವುದರಿಂದಲೂ ಉತ್ತಮ ಮೈಕಟ್ಟನ್ನು ಹೊಂದಬಹುದು.

ನಾವು ನಿಲ್ಲುವಾಗ ತಲೆ, ಎದೆ ಮತ್ತು ಸೊಂಟ ನೇರವಾಗಿರಬೇಕು. ಎದೆಯನ್ನುಬ್ಬಿಸಿ, ಭುಜಗಳಿಗೆ ಸಡಿಲಕೊಡಬೇಕು.

ಕೈಗಳನ್ನು ಎದೆಯ ಮುಂದೆ ಕಟ್ಟುವುದು, ಬೆನ್ನಿನ ಹಿಂದೆ ಕಟ್ಟುವುದು ಅಥವಾ ಸೊಂಟದ ಮೇಲಿಟ್ಟು ನಿಲ್ಲುವುದು ಮುಂತಾದವುಗಳನ್ನು ಮಾಡಬಾರದು. ಅಲ್ಲದೆ ಒಂದೇ ಕಾಲಿನ ಮೇಲೆ ಭಾರ ಬಿಡುವುದು, ಹಿಂದೆ ಮುಂದೆ ಬಾಗುವುದು, ಇಲ್ಲದಿದ್ದರೆ ಗೋಡೆಗೊರಗಿ ನಿಲ್ಲುವುದು ಸರಿಯಲ್ಲ.

ನಡೆಯುವ ವೇಳೆ ತಲೆಯನ್ನೆತ್ತಿ, ಎದೆಯನ್ನುಬ್ಬಿಸಿ ತೋಳುಗಳಿಗೆ ಸಡಿಲಕೆ ಕೊಟ್ಟು ನಡೆಯಬೇಕು, ನಡಿಗೆಗೆ ಅನುಸಾರವಾಗಿ ಕೈಗಳನ್ನು ಹಿಂದೆ ಮುಂದೆ ಲಯಬದ್ಧವಾಗಿ ಆಡಿಸಬೇಕು. ಕೈಗಳನ್ನು ಬೆನ್ನಿನ ಹಿಂದೆ ಕಟ್ಟುವುದು, ಇಲ್ಲದೆ ಪ್ಯಾಂಟಿನ ಜೇಬಿನಲ್ಲಿಟ್ಟು ನಡೆಯುವುದನ್ನು ಮಾಡಬಾರದ ದೀರ್ಘವಾಗಿ ಉಸಿರಾಡಬೇಕು.

ಮೆಟ್ಟಿಲುಗಳನ್ನು ಹತ್ತುವಾಗ, ಮೇಲಿನ ಮೆಟ್ಟಿಲುಗಳನ್ನು ದಿಟ್ಟಿಸಿ ನೋಡುವುದು, ಪಕ್ಕದಲ್ಲಿರುವ ಕಂಬಿಯನ್ನು ಬಲವಾಗಿ ಹಿಡಿದು ಎಳೆಯುವುದು ಮಾಡಬಾರದು. ಮೆಟ್ಟಿಲುಗಳನ್ನಿಳಿಯುವಾಗ ಒಂದು ಮೆಟ್ಟಿಲಿಂದ ಮತ್ತೊಂದು ಮೆಟ್ಟಲಿಗೆ ನೆಗೆಯಬಾರದು. ಹಾಗೆ ಮಾಡುವುದು ಅಪಾಯ.

ಕುರ್ಚಿಯಲ್ಲಿ ಕುಳಿತುಕೊಳ್ಳುವಾಗ ನಮ್ಮ ದೇಹ ನೇರವಾಗಿರಬೇಕು, ನಮ್ಮ ಬೆನ್ನು ಮಾತ್ರ ಕುರ್ಚಿಗೊರಗಿರಬೇಕು, ಅಲ್ಲದೆ ಕುರ್ಚಿಯಲ್ಲಿ ಕುಳಿತು, ಅದನ್ನು ಹಿಂದೆ ಮುಂದೆ ಆಡಿಸಬಾರದು, ಹಾಗೆ ಮಾಡಿದರೆ ನಮ್ಮ ಕುರ್ಚಿ ಮೇಜಿನ ಬಳಿಗೆ ಸರಿದು, ನಾವು ಸಲೀಸಾಗಿ ಕುಳಿತು ಬರೆಯಲು ಸಾಧ್ಯವಿಲ್ಲದಾಗುತ್ತದೆ. ಕುರ್ಚಿಯಲ್ಲಿ ಕುಳಿತು ಕಾಲುಗಳನ್ನು ಚಾಚಬಾರದು.

ಇನ್ನು ದೇಹದ ರಚನೆ ಮತ್ತು ಆರೋಗ್ಯ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಅಂದರೆ ಒಳ್ಳೆಯ ದೇಹ ರಚನೆ ಒಳ್ಳೆಯ ಆರೋಗ್ಯದಿಂದ ಮಾತ್ರ ಸಾಧ್ಯ

ಶರೀರದ ದುರ್ಬಲತೆ, ದೇಹದ ರಚನೆಯನ್ನು ಹಾಳು ಮಾಡುತ್ತದೆ. ಆದಕಾರಣ ಒಳ್ಳೆಯ ಆರೋಗ್ಯ ಬಹಳಮುಖ್ಯ

ಮಿತವಾದ ಆಹಾರ, ಹಸಿರು ತರಕಾರಿ ಸೇವನೆ, ವ್ಯಾಯಾಮ, ಮುಂಜಾನೆ ಮತ್ತು ಸಾಯಂಕಾಲ ಸ್ವಲ್ಪ ದೂರದ ನಡಿಗೆ; ರಾತ್ರಿಯ ವೇಳೆ ಒಳ್ಳೆಯ ನಿದ್ರೆ, ಹಗಲು ಹೊತ್ತಿನಲ್ಲಿ ಸ್ವಲ್ಪ ಸಮಯ ವಿಶ್ರಾಂತಿ ಪಡೆಯುವುದು ಬಹಳಮುಖ್ಯ. ಅಂದರೆ ಮಧ್ಯಾಹ್ನದ ಊಟದ ನಂತರ ಸ್ವಲ್ಪ ವಿಶ್ರಾಂತಿ, ರಾತ್ರಿ ಊಟದ ನಂತರ ಸ್ವಲ್ಪ ದೂರ ನಡೆಯುವುದು ಬಹಳ ಒಳ್ಳೆಯದು. (After dinner rest a while, after supper walk a mile).

ಕೋಪ, ದ್ವೇಷ, ಅಸೂಯೆ, ಭಯ, ದುಃಖ, ಚಿಂತೆ ಮತ್ತು ತಾಪತ್ರಯಗಳಿಂದ ದೂರವಿದ್ದು, ಯಾವುದೇ ವಿಷಯವಾದರೂ ಹಗುರವಾಗಿ ಸ್ವೀಕರಿಸಬೇಕು.

* ಬುಳ್ಳಹಳ್ಳಿ, ಹಾರೋಹಳ್ಳಿ ಅಂಚೆ, ದೇವನಹಳ್ಳಿ, ಬೆಂ.ಗ್ರಾ ಜಿಲ್ಲೆ





# ಶ್ರೀಮಠದಲ್ಲಿ ೭೧ನೇ ಸ್ವಾತಂತ್ರ್ಯೋತ್ಸವ ಸಂಭ್ರಮ



ಸಮಾರಂಭದ ವೇದಿಕೆಗೆ ಆಗಮಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ, ಜಿಲ್ಲಾಧಿಕಾರಿ ಶ್ರೀ ಕೆ.ಪಿ. ಮೋಹನ್‌ರಾಜ್, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಡಾ. ದಿವ್ಯ ವಿ. ಗೋಪಿನಾಥ್ ಮೊದಲಾದ ಗಣ್ಯರು

ಹಲವು ಮಹನೀಯರ ತ್ಯಾಗ, ಬಲಿದಾನ ಹಾಗೂ ಹೋರಾಟಗಳ ಫಲವಾಗಿ ಲಭಿಸಿರುವ ಸ್ವಾತಂತ್ರ್ಯವನ್ನು ರಕ್ಷಿಸುವ ಜವಾಬ್ದಾರಿ ಯುವಜನತೆಯ ಮೇಲಿದೆ. ಮಹಾಪುರುಷರ ತತ್ವಾದರ್ಶಗಳನ್ನು ಪಾಲನೆ ಮಾಡಿದಾಗ ಮಾತ್ರ ಈ ಉತ್ಸವ ಸಾರ್ಥಕವಾಗುತ್ತದೆ' ಎಂದು ಶ್ರೀ ಸಿದ್ಧಗಂಗಾ ಮಠಾಧೀಶ್ವರರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ದಿನಾಂಕ 15–08–2017ರ ಮಂಗಳವಾರ ಶ್ರೀಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ಏರ್ಪಡಿಸಿದ್ದ 71ನೇ ಸ್ವಾತಂತ್ರ್ಯೋತ್ಸವ ಸಮಾರಂಭದ ದಿವ್ಯ ಅಧ್ಯಕ್ಷತೆ ವಹಿಸಿ ತಮ್ಮ ಶಿವನುಡಿಗಳಲ್ಲಿ ತಿಳಿಸಿದರು.

ಕರ್ನಾಟಕ ಸರ್ಕಾರದ ಕಾನೂನು ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರೂ ಆದ ಸನ್ಮಾನ್ಯ ಶ್ರೀ ಟಿ.ಬಿ. ಜಯಚಂದ್ರರವರು ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸಿ ಮಾತನಾಡುತ್ತಾ 'ತುಮಕೂರು ಜಿಲ್ಲೆ ಹಲವು ಮಹನೀಯರ ಹೋರಾಟದಿಂದ ಸ್ವಾತಂತ್ರ್ಯ ಚಳುವಳಿಗೆ ಮಹತ್ತರ ಕೊಡುಗೆ ನೀಡಿದೆ. ಸ್ವಾತಂತ್ರ್ಯದ ಪೂರ್ವೋತ್ತರದ ಅನುಭವಗಳ ಜೀವಂತ ಸಾಕ್ಷಿಯಾಗಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಮಹಾಬೆಳಕಿನಲ್ಲಿ ಸಮಕಾಲೀನರಾಗಿ ಬದುಕಿರುವುದೇ ನಮ್ಮ ಪುಣ್ಯ' ಎಂದರು.

ಸನಿವಾಸ ವಿದ್ಯಾಸಂಸ್ಥೆಗಳ ಶಾಲಾಮಕ್ಕಳಿಂದ, ಸ್ಕೌಟ್ ಮತ್ತು ಗೈಡ್ಸ್, ಸೇವಾದಳ, ಎಸ್.ಸಿ.ಸಿ. ವಿದ್ಯಾರ್ಥಿಗಳಿಂದ ಪಥಸಂಚಲನೆ ನಡೆಯಿತು. ಶಾಲಾಮಕ್ಕಳಿಂದ ವೈವಿಧ್ಯಮಯ ಸಾಂಸ್ಕೃತಿಕ ಚಟುವಟಿಕೆಗಳು ನಡೆದವು. ಸಮಾರಂಭದಲ್ಲಿ ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಸನ್ಮಾನ್ಯ ಶ್ರೀ ಕೆ.ಪಿ. ಮೋಹನ್‌ರಾಜ್‌ರವರು, ತುಮಕೂರು ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳಾದ ಡಾ. ದಿವ್ಯ ವಿ. ಗೋಪಿನಾಥ್‌ರವರು, ತುಮಕೂರು ಜಿಲ್ಲಾ ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳಾದ ಸನ್ಮಾನ್ಯಶ್ರೀ ಕೆ.ಜಿ. ಶಾಂತಾರಾಮ್‌ರವರು, ಶ್ರೀಮಠದ ಆಡಳಿತಾಧಿಕಾರಿಗಳು, ಆಡಳಿತ ಮಂಡಳಿಯವರು, ಸನಿವಾಸ ವಿದ್ಯಾಸಂಸ್ಥೆಗಳ ಮುಖ್ಯಶಿಕ್ಷಕರುಗಳು, ಶಿಕ್ಷಕವರ್ಗದವರು, ಶ್ರೀಮಠದ ಸದ್ಭಕ್ತರು, ಪೋಷಕರು ಭಾಗವಹಿಸಿದ್ದರು. ಪ್ರಾರಂಭದಲ್ಲಿ ಶ್ರೀ ಸಿದ್ಧಗಂಗಾ ಪಿ.ಬಿ.ಇಡಿ ಕಾಲೇಜಿನ ಉಪನ್ಯಾಸಕರಾದ ಶ್ರೀ ಸಿದ್ಧಲಿಂಗಮೂರ್ತಿಗಳು ಸ್ವಾಗತಿಸಿದರು. ಶ್ರೀ ಬಸವೇಶ್ವರ ಡಿ.ಇಡಿ ಕಾಲೇಜಿನ ಉಪನ್ಯಾಸಕರಾದ ಶ್ರೀ ಹೆಚ್. ಸುರೇಶ್‌ರವರು ವಂದಿಸಿದರು. ಉಪನ್ಯಾಸಕರಾದ ಶ್ರೀ ಎನ್.ವಿ. ವಿಶ್ವೇಶ್ವರಯ್ಯನವರು ಕಾರ್ಯಕ್ರಮ ನಿರೂಪಿಸಿದರು.

ವರದಿ : ಕೆ.ಬಿ. ಶಿವಶಂಕರಯ್ಯ



## ದಾನಿಗಳ ಪಟ್ಟಿ



ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ**

**ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೭೫೭. | ಶ್ರೀ ಅಶೋಕ ಕಂಪ್ಲಿ, ಬೆಂಗಳೂರು | ೧,೦೦೧.೦೦ |
| ೧೭೫೮. | ಶ್ರೀ ರಾಮಕೃಷ್ಣ, ಬೆಂಗಳೂರು | ೨,೦೦೦.೦೦ |
| ೧೭೫೯. | ಶ್ರೀ ಎಸ್.ಆರ್. ರೇಣುಕಾರಾಧ್ಯ, ಬೆಂಗಳೂರು | ೧,೦೦೦.೦೦ |
| ೧೭೬೦. | ಶ್ರೀ ವಿ.ಸಿ. ಪರಮಶಿವಯ್ಯ, ಬೆಂಗಳೂರು | ೫,೦೦೦.೦೦ |
| ೧೭೬೧. | ಡಾ. ಸಿ. ಶರತ್‌ಕುಮಾರ್, ಮೈಸೂರು | ೧,೧೧೦.೦೦ |
| ೧೭೬೨. | ಶ್ರೀ ಕೆ.ಎಸ್. ಪಂಡಿತ್, ಬಸವೇಶ್ವರ ಬಡಾವಣೆ, ತುಮಕೂರು | ೧೦,೦೦೧.೦೦ |
| ೧೭೬೩. | ಶ್ರೀ ಸಿ. ಷಡಾಕ್ಷರಯ್ಯ, ಶಿವಮೊಗ್ಗ | ೫೧,೦೦೦.೦೦ |
| ೧೭೬೪. | ಶ್ರೀ ಹೆಚ್.ಎಸ್. ಪೋಮತೇಜೇಶ್, ಮೈಸೂರು | ೧,೦೦೦.೦೦ |
| ೧೭೬೫. | ಶ್ರೀ ಎಸ್. ರಾಜಶೇಖರಯ್ಯ, ಬೆಂಗಳೂರು | ೨,೦೦೦.೦೦ |
| ೧೭೬೬. | ಶ್ರೀ ಲಕ್ಷ್ಮೀನರಸಯ್ಯ, ಆರೂಢಿ | ೧,೫೦೦.೦೦ |
| ೧೭೬೭. | ಶ್ರೀ ಇ. ಶಿವಾನಂದಸ್ವಾಮಿ, ಮೈಸೂರು | ೧,೦೫೦.೦೦ |
| ೧೭೬೮. | ಶ್ರೀ ಆರ್. ವೀರಣ್ಣ, ತೊಂಡಗೆರೆ | ೧,೦೦೦.೦೦ |
| ೧೭೬೯. | ಶ್ರೀ ಎಂ. ಮಹಲಿಂಗಪ್ಪ, ಹುಲಿಕೆರೆ ಕೊಪ್ಪಲು | ೧,೦೦೦.೦೦ |
| ೧೭೭೦. | ಶ್ರೀ ಸಂಗಮೇಶ ಕೊಟ್ರಪ್ಪ ಮೇಲ್‌ಮುರಿ, ಗದಗ್ | ೧೧,೧೧೧.೦೦ |
| ೧೭೭೧. | ಶ್ರೀ ಎಂ.ಬಿ. ರಾಮಕೃಷ್ಣಯ್ಯ, ಬೆಂಗಳೂರು | ೧,೦೦೧.೦೦ |
| ೧೭೭೨. | ಶ್ರೀ ಕೋರಿ ಮಲ್ಲಿಕಾರ್ಜುನ, ಕುಂಚನೇರಿ | ೧,೦೦೧.೦೦ |
| ೧೭೭೩. | ಶ್ರೀ ಜೆ.ಕೆ. ದೇವಗಿರಿಮಠ, ಸುಣಕಲ್‌ಬಿದರಿ | ೧,೦೦೦.೦೦ |
| ೧೭೭೪. | ಶ್ರೀ ರೇಣುಕ ಕೆ. ಪೋಲಿಸ್ ಗೌಡರ್, ಸುಣಕಲ್‌ಬಿದರಿ | ೧,೦೦೦.೦೦ |
| ೧೭೭೫ | ಶ್ರೀ ಮ್ಯಾಲೂರು ಚನ್ನಬಸವನಗೌಡ, ಇಬ್ರಾಹಿಂಪುರ | ೧,೦೦೧.೦೦ |
| ೧೭೭೬. | ಶ್ರೀ ಕುಮಾರಸ್ವಾಮಿ, ಆಲ್‌ದಾಳ | ೧,೦೦೦.೦೦ |
| ೧೭೭೭. | ಶ್ರೀ ಸಿ.ಎಸ್. ಮಹೇಶ್, ಚಿಲಕಹಳ್ಳಿ | ೧,೧೦೦.೦೦ |
| ೧೭೭೮. | ಶ್ರೀ ಕೆ. ಗಂಗಣ್ಣ, ಕಾಗ್ಗೆರೆ | ೧,೧೧೦.೦೦ |
| ೧೭೭೯. | ಶ್ರೀ ಡಿ.ಎಂ. ಮಂಜುನಾಥ್ ಘಂಟಿ, ಮೂಡಬಿದರೆ | ೧,೦೦೦.೦೦ |
| ೧೭೮೦ | ಶ್ರೀ ಸಿದ್ಧಪ್ಪ, ಬೆಂಗಳೂರು | ೧,೦೦೦.೦೦ |
| ೧೭೮೨. | ಶ್ರೀ ಬಿ.ವಿ. ಸದಾನಂದ, ಬೆಂಗಳೂರು | ೨,೦೦೦.೦೦ |
| ೧೭೮೩. | ಶ್ರೀ ಪ್ರಮೋದ್ ಕೊತ್‌ವಾಲ, ಥಾನೆ | ೨,೦೦೦.೦೦ |
| ೧೭೮೪. | ಶ್ರೀ ಸಿ.ಎಂ. ರಂಗಣ್ಣ, ದೊಡ್ಡಬಳ್ಳಾಪುರ | ೧,೦೦೧.೦೦ |
| ೧೭೮೫. | ಶ್ರೀ ಕರಿಬಸವಯ್ಯ, ಬೆಂಗಳೂರು | ೧,೦೦೧.೦೦ |
| ೧೭೮೬. | ಶ್ರೀ ಪಾಲಾಕ್ಷಪ್ಪ, ಬೆಂಗಳೂರು | ೨,೦೦೦.೦೦ |
| ೧೭೮೭. | ಶ್ರೀ ಜಿ.ಎನ್. ಪ್ರಕಾಶ್‌ಕುಮಾರ್, ತಿಪಟೂರು | ೧,೦೦೦.೦೦ |
| ೧೭೮೮. | ಶ್ರೀ ಎಸ್.ಎಸ್. ಪಾಟೀಲ್, ನಾಗ್‌ಪುರ, ಮಹಾರಾಷ್ಟ್ರ ರಾಜ್ಯ | ೨೫,೦೦೦.೦೦ |
| ೧೭೮೯. | ಶ್ರೀ ಬಸವರಾಜು ಸಿ. ಮಳೀಮಠ ಮತ್ತು ಕುಟುಂಬ, ರಾಣೆಬೆನ್ನೂರು | ೩,೫೦೦.೦೦ |
| ೧೭೯೦. | ಶ್ರೀ ಎಸ್.ಬಿ. ಸಿಂಗರೆಡ್ಡಿ, ಬಾಗಲಕೋಟೆ | ೫,೦೦೦.೦೦ |
| ೧೭೯೧. | ಶ್ರೀ ವೀರೇಶ್ ಕಡಕೋಲ್‌ಮಠ, ಹುಬ್ಬಳ್ಳಿ | ೫,೦೦೦.೦೦ |
| ೧೭೯೨. | ಶ್ರೀ ಎಸ್.ಎಸ್. ಚಿಕ್ಕರೆಡ್ಡಿ, ಬಾಗಲಕೋಟೆ | ೨,೦೦೦.೦೦ |

*(ಮುಂದುವರೆಯುತ್ತದೆ)*

RNI No. 17139/69

"Siddaganga" Monthly - Postal Reg. No. L2/RNP/385/TMR/2015-17



ಮಾಜಿ ಲೋಕಸಭಾಧ್ಯಕ್ಷರಾದ ಶ್ರೀ ಶಿವರಾಜ ಪಾಟೀಲ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಶ್ರೀಮಠದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ದರ್ಶನ ಮಾಡಿ ನಂತರ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.



ಉಪ ಲೋಕಾಯುಕ್ತ ನ್ಯಾಯಮೂರ್ತಿ ಶ್ರೀ ಸುಭಾಷ್ ಬಿ. ಅದಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು.



ಅಖಿಲ ಭಾರತ ನಾಗರಿಕ ಸೇವೆಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ರಾಷ್ಟ್ರದಲ್ಲೇ ಪ್ರಥಮ ರ್‍ಯಾಂಕ್ ಪಡೆದ ರಾಜ್ಯದ ಕು॥ ಕೆ.ಆರ್. ನಂದಿನಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.



ತುಮಕೂರು ವಿಶ್ವವಿದ್ಯಾಲಯ ಏರ್ಪಡಿಸಿದ್ದ ಅಂತರ ಕಾಲೇಜು ಗುಡ್ಡಗಾಡು ಓಟದ ಸ್ಪರ್ಧೆಯಲ್ಲಿ ಭಾಗವಹಿಸಿ ರಾಜ್ಯಮಟ್ಟಕ್ಕೆ ಆಯ್ಕೆಯಾಗಿರುವ ಶ್ರೀಮಠದ ಕನ್ನಡ ಪಂಡಿತ್ ಕಾಲೇಜಿನ ವಿದ್ಯಾರ್ಥಿ ಶ್ರೀ ಜಗದೀಶ್ ಪರಮಪೂಜ್ಯರ ದರ್ಶನ ಮಾಡಿ ಆಶೀರ್ವಾದ ಪಡೆದರು.



ಸಿದ್ಧಗಂಗಾ ಪತ್ರಿಕಾ ಕಛೇರಿಗೆ ಕಂಪ್ಯೂಟರ್‌ನ್ನು ಕೊಡುಗೆಯಾಗಿ ನೀಡಿದ ಶ್ರೀ ಜಗದೀಶ್ ಅವರನ್ನು ಪೂಜ್ಯ ಶ್ರೀ ಶ್ರೀಗಳವರು ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಶ್ರೀ ಸಿ. ಕುಮಾರಸ್ವಾಮಿ ಅವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಲಿಂಗೇಶ್ವರ ಕನ್ನಡ ಪಂಡಿತ್ ಪದವಿ ಕಾಲೇಜು ವತಿಯಿಂದ ಶ್ರೀಮಠದಲ್ಲಿ ಏರ್ಪಡಿಸಿದ್ದ ಸಸಿ ನೆಡುವ ಕಾರ್ಯಕ್ರಮಕ್ಕೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸಸಿ ನೆಡುವುದರ ಮೂಲಕ ಚಾಲನೆ ನೀಡಿದರು.

email ID : geetanjaligraphics@gmail.com